

## ಮುತ್ತಯ್ಯ ಭಾಗವತರ

# ಶ್ರೀ ತ್ಯಾಗರಾಜ ವಿಜಯ

### ಸಂಸ್ಕೃತ ಕಾವ್ಯದ ಕನ್ನಡ ಅನುವಾದ

**ಹರಿಕೇಶನಲ್ಲೂರು ಮುತ್ತಯ್ಯ ಭಾಗವತರು** : ಜನನ (೧೮೭೭). ತಮಿಳುನಾಡಿನ ಶ್ರೀವಿಲ್ಲಿ ಪುತ್ತೂರು ಬಳಿಯ ಪುನಲ್‌ವೇಲಿ ಗ್ರಾಮದಲ್ಲಿ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಇವರಿಗೆ ಹರಿಕೇಶನಲ್ಲೂರಿನಲ್ಲಿ ಸೋದರಮಾವನ ಆಶ್ರಯ; ವೇದಾಧ್ಯಯನ ಪ್ರಾರಂಭ. ತಿರುವೈಯಾರಿನ ಖ್ಯಾತ ಸಂಗೀತ ವಿದ್ವಾಂಸರಿಂದ ಆಕರ್ಷಿತರಾಗಿ, ವೇದಾಧ್ಯಯನವನ್ನು ಬಿಟ್ಟು ಸಂಗೀತದ ಕಲಿಕೆ ಪ್ರಾರಂಭ. ಅನತಿ ಕಾಲದಲ್ಲಿಯೇ ಒಬ್ಬ ಪ್ರಸಿದ್ಧ ಗಾಯಕರೆನಿಸಿಕೊಂಡ ಇವರಿಗೆ ತಿರುವಾಂಕೂರಿನ ಮಹಾರಾಜರಿಂದ ಉನ್ನತ ಗೌರವ-ಪ್ರಶಸ್ತಿಗಳ ಪ್ರದಾನ.

ಮಹಾರಾಷ್ಟ್ರದ ಕೃಷ್ಣಭಟ್ ಎಂಬುವರಲ್ಲಿ ಕಥಾಕಾಲಕ್ಷೇಪದಲ್ಲಿ ಶಿಕ್ಷಣ ಪಡೆದು, ಮಧುರೆಯಲ್ಲಿ ನೆಲಸಿದ ಭಾಗವತರು ತಮ್ಮ ಇಂಪಾದ ಕಂಠಶ್ರೀ, ಹಾಸ್ಯಪ್ರವೃತ್ತಿ, ಉತ್ತಮ ಕಥಾ ನಿರೂಪಣಾ ಶೈಲಿಗಳಿಂದ ಹರಿಕಥೆಗಳನ್ನು ಮಾಡುವುದರಲ್ಲೂ ಖ್ಯಾತಿ ಗಳಿಸಿದರು. ೧೯೦೫ರಲ್ಲಿ ತಂಜಾವೂರಿನಲ್ಲಿ ನೆಲಸಿ, ಸಂಗೀತಶಾಸ್ತ್ರದ ಅಧ್ಯಯನವನ್ನು ಮುಂದುವರಿಸಿ, ಅಲ್ಲಿನ ಸರಸ್ವತೀ ಮಹಲ್ ಪುಸ್ತಕಭಂಡಾರದಲ್ಲಿ ಸಂಶೋಧನೆ ನಡೆಸಿ, ಹಲವಾರು ಅಜ್ಞಾತ ಗ್ರಂಥಗಳನ್ನು ಬೆಳಕಿಗೆ ತಂದರು. ಜಮೀನ್ದಾರರೊಬ್ಬರ ಆಹ್ವಾನದ ಮೇಲೆ ಕರೂರಿನಲ್ಲಿ ಐದು ವರ್ಷ ಅವಿರತ ಕಥಾಕಾಲಕ್ಷೇಪ; ರಂಗೂನ್ ಮತ್ತು ಕಲ್ಕತ್ತ ನಗರಗಳಲ್ಲಿಯೂ ಕೆಲಕಾಲ ಕಥಾ ಕಾಲಕ್ಷೇಪ ನಡೆಸಿ ಕೀರ್ತಿಶಾಲಿಯಾಗಿ ಮದರಾಸಿಗೆ ಬಂದು ನೆಲಸಿದರು.

ಇವರ ಗಾಯನದಿಂದ ಆಕರ್ಷಿತರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ ಮೈಸೂರಿನ ಆಸ್ಥಾನ ವಿದ್ವಾಂಸರಾಗಿ ನೇಮಕ (೧೯೨೭); ಮರುವರ್ಷವೇ 'ಗಾಯಕ ಶಿಖಾಮಣಿ' ಬಿರುದು ಮತ್ತು ಖಿಲ್ಲತ್ತುಗಳ ಸಂದಾಯ. ಮದರಾಸಿನ ಮ್ಯೂಸಿಕ್ ಅಕಾಡೆಮಿಯಿಂದ 'ಸಂಗೀತ ಕಲಾನಿಧಿ' ಪ್ರಶಸ್ತಿ (೧೯೩೦). ೧೯೩೬ರಲ್ಲಿ ತಿರುವಾಂಕೂರಿಗೆ ಪಯಣ; ಅಲ್ಲಿಯ ತಿರುನಾಳ್ ಮಹಾರಾಜ ಸಂಗೀತ ಕಾಲೇಜಿನ ಪ್ರಥಮಾಚಾರ್ಯರಾಗಿ ಕಾರ್ಯ ನಿರ್ವಹಣೆ (೧೯೩೮-೪೩); 'ಸಂಗೀತ ಕಲ್ಪದ್ರುಮಂ' ಸಂಶೋಧನಾ ಕೃತಿಗಾಗಿ ತಿರುವಾಂಕೂರು ವಿಶ್ವವಿದ್ಯಾನಿಲಯದಿಂದ ಡಿ. ಲಿಟ್. ಪದವಿ ಪ್ರದಾನ. ಮೈಸೂರಿಗೆ ಹಿಂತಿರುಗಿ ಬಂದ ಭಾಗವತರು ಜೂನ್ ೩೦, ೧೯೪೫ರಂದು ಕಾಲವಶರಾದರು.

ಗೋಟುವಾದ್ಯ (ಚಿತ್ರವೀಣೆ) ಮತ್ತು ಮೃದಂಗವನ್ನು ನುಡಿಸುವುದರಲ್ಲೂ ಪ್ರವೀಣರಾಗಿದ್ದ ಮುತ್ತಯ್ಯ ಭಾಗವತರ ಅನೇಕ ಕೃತಿಗಳು ಸಂಸ್ಕೃತ, ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿದ್ದು ಹರಿಕೇಶ ಅಥವಾ ಹರಿಕೇಶಪುರ ಎಂಬ ಅಂಕಿತವನ್ನು ಹೊಂದಿವೆ.

**ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ** : ಜನನ (೧೯೨೫), ಚಾಮರಾಜನಗರ ಜಿಲ್ಲೆಯ ವೆಂಕಟಯ್ಯನ ಛತ್ರ ಗ್ರಾಮದಲ್ಲಿ. ಮೈಸೂರು ವಿಶ್ವವಿದ್ಯಾನಿಲಯದ ಬಿ. ಎ. (ಆನರ್ಸ್) (೧೯೪೭) ಮತ್ತು ಬಿ.ಎಡ್. (೧೯೬೨) ಪದವಿಗಳು; ಕಾಶಿ ವಿಶ್ವವಿದ್ಯಾನಿಲಯದ ಎಂ.ಎ. ಪದವಿ (೧೯೬೧). 'ಹೊಯ್ಸಳ ಯುಗದ ಜನಜೀವನ: ಕ್ರಿ. ಶ. ೧೦೦೦-೧೩೪೦' ಪ್ರೌಢ ಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಪಿಎಚ್. ಡಿ. ಪದವಿ (೧೯೭೧).

ಸಂಗೀತ, ಇತಿಹಾಸ, ಹರಿದಾಸರು, ಇತ್ಯಾದಿಗಳಿಗೆ ಸಂಬಂಧಿಸಿದ ಅನೇಕ ವಿದ್ವತ್‌ಪೂರ್ಣ ಲೇಖನಗಳು ಮಾತ್ರವಲ್ಲದೆ ಹಲವಾರು ಪ್ರಮಾಣಗ್ರಂಥಗಳನ್ನೂ, ಸಂಶೋಧನಾ ಕೃತಿಗಳನ್ನೂ ಪ್ರಕಟಿಸಿರುವ ಸಂಪತ್ಕುಮಾರಾಚಾರ್ಯರ 'ಸದ್ಗುರು ತ್ಯಾಗರಾಜರು : ಜೀವನ-ಸಾಧನೆ-ಕೊಡುಗೆ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭ್ಯವಾಗಿದೆ (೧೯೮೭). ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಶ್ರೀ ತ್ಯಾಗರಾಜ ಸಂಗೀತ ಸಭಾ, ಕಾವ್ಯರಂಜನೀ ಸಭಾ, ಭಾರತೀಯ ಇತಿಹಾಸ ಸಂಕಲನ ಸಮಿತಿ (ಮೈಸೂರು), ಬೆಂಗಳೂರಿನ ಗಾಯನ ಸಮಾಜ, ಮುಂತಾದ ಪ್ರತಿಷ್ಠಿತ ಸಾಂಸ್ಕೃತಿಕ-ಸಂಗೀತ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಇವರನ್ನು ಕರ್ನಾಟಕ ಸರ್ಕಾರ 'ಕರ್ನಾಟಕ ಕಲಾತಿಲಕ' ಪ್ರಶಸ್ತಿ ನೀಡಿ ಗೌರವಿಸಿದೆ (೧೯೯೪).

ಮುತ್ತಯ್ಯ ಭಾಗವತರ

# ಶ್ರೀ ತ್ಯಾಗರಾಜ ವಿಜಯ

ಸಂಸ್ಕೃತ ಕಾವ್ಯದ ಭಾವಾನುವಾದ

ಕರ್ನಾಟಕ ಕಲಾತಿಲಕ
ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧

*SRI TYĀGARĀJA VIJAYA of Srī Harikeshanallur Muttayya Bhagavatar*—
Translation of the Samskrita Kavya entitled *Srīmattyāgarājavijayam* into Kannada Language by Dr. V. S. SAMPATHKUMARACHARYA, M.A., B.ED., PH.D. Published by GEETHA BOOK HOUSE, K. R. Circle, Mysore 570001.
First Published 1998.

ಪ್ರಥಮ ಮುದ್ರಣ ೧೯೯೮





This volume has been published with the financial assistance of Tirumala Tirupati Devasthanams, under their Scheme of Aid to Publish Religious Books.

ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ, ಮೈಸೂರು ಪ್ರಿಂಟಿಂಗ್ ಪ್ರೆಸ್
1210, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು ೫೭೦ ೦೦೪

# ವಿಷಯಾನುಕ್ರಮಣಿಕೆ

# ಡಾ. ವಿ. ಎಸ್. ಸಂಪತ್ಕುಮಾರಾಚಾರ್ಯ
# ಅವರ ಕೃತಿಗಳು

ಕರ್ನಾಟಕ ಸಂಗೀತ ಸುಧಾ (ಪ್ರೊ. ವಿ. ರಾಮರತ್ನಂ ಅವರೊಂದಿಗೆ)
ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ : ಸಂಪುಟ ೧
ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ : ಸಂಪುಟ ೨
ಸದ್ಗುರು ತ್ಯಾಗರಾಜರು : ಜೀವನ–ಸಾಧನೆ–ಕೊಡುಗೆ
ಸಂಗೀತ ರಸಿಕ ರಂಜನಿ : ಸಂಗೀತವನ್ನು ಸವಿಯುವ ಸುಲಭ ಮಾರ್ಗ
ಶ್ರೀ ತ್ಯಾಗರಾಜ ಕೃತಿಮಂಜರಿ (ಸಂಪೂರ್ಣ ಪಾಠ, ಸಾಹಿತ್ಯ, ಭಾವಾರ್ಥ, ಟಿಪ್ಪಣಿ ಸಹಿತ—ಎರಡು ಸಂಪುಟಗಳಲ್ಲಿ)
ಕೃಷ್ಣದೇವರಾಯನ ದಿನಚರಿ ವಿಸ್ತಾರ (ಸಂಪಾದಿತ ಓಲೆಗರಿ ಗ್ರಂಥ)
ಸಂಗೀತ ಕಲೆಗೆ ಮೈಸೂರು ಒಡೆಯರ ಪ್ರೋತ್ಸಾಹ – ಕೊಡುಗೆ (ಶ್ರೀ ಎಂ. ಎಲ್. ಶಿವಶಂಕರ ಅವರೊಂದಿಗೆ)
ರಾಜರು ಮತ್ತು ರಾಜ್ಯಗಳು (ಶ್ರೀರಾಂ ಸಾಠೆಯವರ ಕೃತಿಯ ಅನುವಾದ) (ಶ್ರೀ ಭುಜಂಗಾಚಾರ್ಯ ಅವರೊಂದಿಗೆ)
ಕರ್ನಾಟಕ ಸಂಗೀತ ದೀಪಿಕಾ (ಭಾಗ ೧, ೨) (ಪ್ರೊ. ವಿ. ರಾಮರತ್ನಂ ಅವರೊಂದಿಗೆ)*
*Musings on Andal's Tiruppavai : A Garland of Thirty Multi-Coloured Verses**

* ಮುಂಬರಲಿರುವ ಗ್ರಂಥಗಳು

# ನಿವೇದನೆ

ದಕ್ಷಿಣ ಭಾರತದ ವಾಗ್ಗೇಯಕಾರರಲ್ಲಿ ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಸದ್ಗುರು ತ್ಯಾಗರಾಜಸ್ವಾಮಿಯಷ್ಟು (ಕ್ರಿ.ಶ. ೧೭೬೭–೧೮೪೭) ಪ್ರಭಾವ ಬೀರಿರುವವರು ಯಾರೂ ಇಲ್ಲವೆಂದರೆ ತಪ್ಪಾಗಲಾರದು. ಅವರು ತಮಿಳುನಾಡಿನಲ್ಲಿ ಜನಿಸಿ ಅಲ್ಲೇ ವಾಸಿಸಿದರು. ಅವರ ಶಿಷ್ಯರಲ್ಲಿ ಹೆಚ್ಚು ಮಂದಿ ತಮಿಳುನಾಡಿನವರು. ತಮ್ಮ ಮಾತೃ ಭಾಷೆಯಾದ ತೆಲುಗನ್ನು ತಮ್ಮ ರಚನೆಗಳಲ್ಲಿ ವಿಪುಲವಾಗಿ ಬಳಸಿದರು. ಅವರು ಆಂಧ್ರರಿಗೆ, ತಮಿಳರಿಗೆ, ಕೇರಳದವರಿಗೆ, ಕನ್ನಡಿಗರಿಗೆ ಆದರ್ಶಪ್ರಾಯರು ಹಾಗೂ ಪೂಜಾರ್ಹರು. ತಮಿಳರಾದ ದೇಶಭಕ್ತ ಕವಿ ಸುಬ್ರಹ್ಮಣ್ಯ ಭಾರತಿಯವರು ಅವರ ರಚನೆಗಳನ್ನು ಆರ್ಯಸಂಪತ್ತು ಹಾಗೂ ರಸಗಳ ಸಾಗರವೆಂದಿದ್ದಾರೆ. ಕರ್ನಾಟಕ ಸಂಗೀತದ ಮೇಲೆ ಅವರ ಪ್ರಭಾವವೆಷ್ಟಿದೆ ಎಂದರೆ ಕರ್ನಾಟಕ ಸಂಗೀತದ ಇತಿಹಾಸವನ್ನು ತ್ಯಾಗರಾಜರ ಹಿಂದಿನ ಯುಗ, ತ್ಯಾಗರಾಜರ ಯುಗ, ತ್ಯಾಗರಾಜರ ನಂತರದ ಯುಗ ಎಂದು ಗುರುತಿಸುವ ರೂಢಿ ಬಂದಿದೆ. ತ್ಯಾಗರಾಜರು ಸಹಜ ವಾಗ್ಗೇಯಕಾರ ಚಕ್ರವರ್ತಿ, ಭಕ್ತಶಿರೋಮಣಿ ಹಾಗೂ ದೈವಾನುಗ್ರಹಕ್ಕೆ ಪಾತ್ರರಾದ ಒಬ್ಬ ಯುಗಪುರುಷ.

ಇವರ ಜೀವನ ಚರಿತ್ರೆ, ಸಾಧನೆ, ಕೊಡುಗೆ, ವ್ಯಕ್ತಿತ್ವ ಇತ್ಯಾದಿಗಳನ್ನು ಕುರಿತು ವಿವಿಧ ಭಾಷೆಗಳಲ್ಲಿ ಅನೇಕರು ಗ್ರಂಥಗಳನ್ನು ರಚಿಸಿದ್ದಾರೆ ; ವಿಶ್ಲೇಷಣೆ ಮಾಡಿದ್ದಾರೆ ; ಡಾಕ್ಟರೇಟ್ ಪದವಿಗಳನ್ನು ಪಡೆದಿದ್ದಾರೆ. ಹಲವು ಭಕ್ತ ವಿದ್ವಾಂಸರು ಅವರನ್ನು ಕುರಿತು ಸ್ತೋತ್ರಗಳು, ಅಷ್ಟಕಗಳು, ನಾಮಾವಳಿಗಳನ್ನು ರಚಿಸಿದ್ದಾರೆ. ವಾಲಾಜಪೇಟೆ ವೆಂಕಟರಮಣ ಭಾಗವತರ ಗುರುಸ್ತೋತ್ರಾಷ್ಟಕಮ್, ಗುರುಮಂಗಳಾಷ್ಟಕಮ್ (ಸಂಸ್ಕೃತ), ಆದಿಗುರುಸ್ತೋತ್ರಪಂಚಕಂ (ತೆಲುಗು), ಶ್ರೀ ಕಾಕರ್ಲಾನ್ವಯ ರತ್ನಾಕರ (ಮಣಿಪ್ರವಾಳ ರಚನೆ), ತುಮು ನರಸಿಂಹದಾಸರ 'ಕೇವಲಾನಂದ' ಎಂಬ ತೆಲುಗು ಸೀಸಪದ್ಯ, ವಾಲಾಜಪೇಟೆ ವೆಂಕಟರಮಣ ಭಾಗವತರ ಪೌತ್ರ ಕೆ. ಕೆ. ರಾಮಸ್ವಾಮಿ ಭಾಗವತ ವಿರಚಿತ ತ್ಯಾಗರಾಜರ ಚರಿತ್ರೆ (ತಮಿಳು), ಬೆಂಗಳೂರು ನಾಗರತ್ನಮ್ಮ ವಿರಚಿತ ಶ್ರೀ ತ್ಯಾಗರಾಜ ಸ್ತುತಿಮಾಲೆ—ಇವುಗಳಲ್ಲದೆ ಸಂಸ್ಕೃತದಲ್ಲಿ ಶ್ರೀ ತ್ಯಾಗರಾಜ ಚರಿತ ಎಂಬ ಕಾವ್ಯ ಗ್ರಂಥವನ್ನು ಟಿ. ಸುಂದರೇಶ ಶರ್ಮರವರು (೧೯೩೭), ಮತ್ತು ಸುಮಾರು ಅದೇ ಕಾಲದಲ್ಲಿ ಪರಿಕೇಶನಲ್ಲೂರು ಮುತ್ತಯ್ಯ ಭಾಗವತರು ಶ್ರೀಮತ್ತ್ಯಾಗರಾಜವಿಜಯಮ್ ಎಂಬ ಕಾವ್ಯಗ್ರಂಥವನ್ನು ರಚಿಸಿರುವರು. ಶ್ರೀ ತ್ಯಾಗರಾಜ ಚರಿತವು ೧,೮೦೦ ಸುಂದರವಾದ ಶ್ಲೋಕಗಳುಳ್ಳ ವಿವರವಾದ ಕಾವ್ಯ. ಶ್ರೀಮತ್ತ್ಯಾಗರಾಜವಿಜಯಂ ೪೮೭ ಶ್ಲೋಕಗಳುಳ್ಳ ಏಳು ಸರ್ಗಗಳ ಕಾವ್ಯ. ಭಾಗವತರು ಮೈಸೂರು ಮತ್ತು ತಿರುವಾಂಕೂರು ಆಸ್ಥಾನಗಳ ವಿದ್ವಾಂಸರು, ಖ್ಯಾತ ಗಾಯಕರು, ಗೋಟುವಾದ್ಯ

ವಿದ್ವಾಂಸರು, ಕವಿ, ಹರಿಕಥಾ ಭಾಗವತರು ಮತ್ತು ವಾಗ್ಗೇಯಕಾರರು ಮಾತ್ರವಲ್ಲದೆ ಸದ್ಗುರು ತ್ಯಾಗರಾಜಸ್ವಾಮಿಯ ಒಬ್ಬ ಪರಮ ಭಕ್ತರೂ ಆಗಿದ್ದರು. ಅವರ ಪರಮ ಭಕ್ತಿಯ ಫಲವೇ ಈ ಸಂಸ್ಕೃತ ಕಾವ್ಯ. ಈ ಕಾವ್ಯಗ್ರಂಥದ ಒಂದು ಪ್ರತಿಯು ನನಗೆ ಆಕಸ್ಮಾತ್ತಾಗಿ ದೊರಕಿತು. ಓದಿ ನೋಡಿದ ಮೇಲೆ ಇದು ಎಲ್ಲರಿಗೂ ಅರ್ಥವಾಗುವಂತೆ ದೊರಕುವಂತಾಗಬೇಕು ಎಂಬ ಆಸೆ ಬೆಳೆಯಿತು ಮತ್ತು ಅದರ ಕನ್ನಡಾನುವಾದ ಮಾಡಲು ಪ್ರೇರಣೆಯಾಯಿತು.

ಈ ಕಾವ್ಯವು ಏಳು ಸರ್ಗಗಳುಳ್ಳ ಗ್ರಂಥ. ಸಂಗೀತದ ಸ್ವರಗಳು ಏಳು. ಆದ್ದರಿಂದ ಕಾವ್ಯದ ಸರ್ಗಗಳು ಏಳು. ಪ್ರತಿ ಸರ್ಗದ ಮೊದಲ ಶ್ಲೋಕದ ಮೊದಲ ಅಕ್ಷರವು ಅನುಕ್ರಮವಾಗಿ ಸ, ರಿ, ಗ, ಮ, ಪ, ದ, ನಿ, ಎಂಬ ಅಕ್ಷರಗಳಿಂದ ಪ್ರಾರಂಭವಾಗಿರುವುದು ಒಂದು ವಿಶೇಷ. ಮೊದಲ ಸರ್ಗವು ಸರ್ವಸ್ಯ ಎಂಬ ಪದದಿಂದ ಆರಂಭವಾಗಿದ್ದು ಇದರಲ್ಲಿ ಗುರುದೇವರಾದ ತ್ಯಾಗರಾಜಸ್ವಾಮಿಯ ಚರಿತ್ರೆಯನ್ನು ಹೇಳಲು ಕಾರಣ, ತ್ಯಾಗರಾಜರ ಪೂರ್ವಿಕರು, ಅವರ ಮಾತಾಪಿತೃಗಳು ಸುಪುತ್ರನನ್ನು ಪಡೆಯಲು ಕೈಗೊಂಡ ಸೇವೆ ಇತ್ಯಾದಿಗಳನ್ನೂ, ಎರಡನೆಯ ಸರ್ಗದಲ್ಲಿ ತ್ಯಾಗರಾಜರ ಜನನ, ಬಾಲ್ಯ, ತಿರುವೈಯ್ಯಾರಿಗೆ ಬಂದು ನೆಲಸಿದುದು, ವಿದ್ಯಾಭ್ಯಾಸ ಇತ್ಯಾದಿಗಳನ್ನೂ, ಮೂರನೆಯ ಸರ್ಗದಲ್ಲಿ ಅವರ ವಿವಾಹ, ಜಪ್ಯೇಶನಿಂದ ಮನೆ ಭಾಗವಾದುದು ಇತ್ಯಾದಿಗಳನ್ನೂ, ನಾಲ್ಕನೆಯ ಸರ್ಗ ದಲ್ಲಿ ರಾಮಬ್ರಹ್ಮರು ಕಾಲವಾದುದು, ಒಬ್ಬ ಬ್ರಾಹ್ಮಣನ ಆಗಮನ, ರಾಮತಾರಕ ಮಂತ್ರೋಪದೇಶ, ತ್ಯಾಗರಾಜರಿಂದ ರಾಮಮಂತ್ರ ಜಪ, ಶ್ರೀರಾಮಚಂದ್ರನ ದರ್ಶನ, ಕೃತಿರಚನೆ ಇತ್ಯಾದಿಗಳನ್ನೂ, ಐದನೆಯ ಸರ್ಗದಲ್ಲಿ ಅವರು ನಡೆಸುತ್ತಿದ್ದ ಆರಾಧನೆ, ಉತ್ಸವ, ಒಬ್ಬ ಯತಿಯಿಂದ ಒಂದು ಗ್ರಂಥದ ಕೊಡುಗೆ, ಸ್ವಪ್ನದಲ್ಲಿ ಆ ಯತಿಯ ದರ್ಶನ ಇತ್ಯಾದಿಗಳನ್ನೂ, ಆರನೆಯ ಸರ್ಗದಲ್ಲಿ ತ್ಯಾಗರಾಜರ ಕೀರ್ತಿ, ಶರಭೋಜಿಯ ಆಹ್ವಾನದ ನಿರಾಕರಣೆ, ರಾಜನ ಉದರಶೂಲೆ ಮತ್ತು ಅದರ ನಿವಾರಣೆ, ಜಪ್ಯೇಶನು ಶ್ರೀರಾಮ ವಿಗ್ರಹವನ್ನು ಕಾವೇರಿಗೆ ಎಸೆದಿದ್ದು, ತ್ಯಾಗರಾಜರಿಗೆ ಸ್ವಪ್ನದಲ್ಲಿ ಮೂರ್ತಿ ಕಾಣಿಸಿಕೊಂಡು ಅದು ದೊರಕಿದ ಬಗೆ, ಸ್ವಾತಿ ತಿರುನಾಳ್ ಮಹಾರಾಜರ ಆಹ್ವಾನ ಮತ್ತು ತ್ಯಾಗರಾಜರ ಪತ್ರ, ಶಿವದರ್ಶನ ಇತ್ಯಾದಿಗಳನ್ನೂ, ಏಳನೆಯ ಸರ್ಗದಲ್ಲಿ ತ್ಯಾಗರಾಜರಿಂದ ಕ್ಷೇತ್ರಗಳ ದರ್ಶನ, ಘಟನೆಗಳು, ಪತ್ನಿಯ ವಿಯೋಗ, ಸಂಗೀತರೂಪಕ ಗಳ ರಚನೆ, ಸ್ವಪ್ನದಲ್ಲಿ ಶ್ರೀರಾಮನ ದರ್ಶನ, ಆದೇಶ, ಸನ್ಯಾಸಿಯಾದುದು, ಕೊನೆಯ ದಿನಗಳು, ತಿರುವೈಯ್ಯಾರಿನಲ್ಲಿ ಕಾವೇರಿ ತೀರದಲ್ಲಿ ಅವರ ಸಮಾಧಿ, ಆರಾಧನೋತ್ಸವ, ಫಲಶ್ರುತಿ ಇತ್ಯಾದಿಗಳನ್ನೂ ಸುಂದರವಾಗಿ ವರ್ಣಿಸಲಾಗಿದೆ.

ಆಗಿನ ತಿರುವಾಂಕೂರು ಸಂಸ್ಥಾನದ ಪ್ರಸಿದ್ಧ ದಿವಾನರಾಗಿದ್ದ ಸರ್ ಸಿ. ಪಿ. ರಾಮ ಸ್ವಾಮಿ ಅಯ್ಯರ್ ಮೂಲ ಗ್ರಂಥಕ್ಕೆ ಮುನ್ನುಡಿಯನ್ನು ಇಂಗ್ಲಿಷಿನಲ್ಲೂ, ಪಂಡಿತ ವೆಂಕಟ ರಾಮ ಶರ್ಮರು ಸಂಸ್ಕೃತದಲ್ಲಿ ಮುನ್ನುಡಿಯನ್ನೂ, ವಿದ್ವಾನ್ ಕೆ. ವಿ. ಕೃಷ್ಣಶರ್ಮರು ಪ್ರತಿಯೊಂದು ಸರ್ಗದ ಕೆಲವು ವಿಷಯಗಳಿಗೆ ಸಂಸ್ಕೃತದಲ್ಲಿ 'ಪದಾರ್ಥಚಂದ್ರಿಕಾ' ಎಂಬ

ಲಘು ಟಿಪ್ಪಣಿಗಳನ್ನೂ ಬರೆದಿದ್ದಾರೆ. ಇವೆಲ್ಲವನ್ನೂ ಕನ್ನಡ ರೂಪಾಂತರಗೊಳಿಸಿದ್ದೇನೆ. ಈ ನನ್ನ ಕೆಲಸದಲ್ಲಿ ಸಹಕಾರ ನೀಡಿರುವ ಆತ್ಮೀಯ ಗೆಳೆಯರು ವಿದ್ವಾನ್ ಡಾ॥ ಸಿ. ಗುರುಮೂರ್ತಿ ಮತ್ತು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದ ವಿದ್ವಾನ್ ಡಾ॥ ಹೆಚ್. ವಿ. ನಾಗರಾಜರಾವ್, ವಿದ್ವಾನ್ ಡಾ॥ ಹೆಚ್. ವಿ. ಪಾಠಕ್ ಮತ್ತು ಉತ್ತೇಜನ ನೀಡಿದ ಸಾಹಿತ್ಯರತ್ನ (ದಿವಂಗತ) ವಿದ್ವಾನ್ ಟಿ. ವಿ. ನಾರಾಯಣ ಶಾಸ್ತ್ರಿ. ಇವರೆಲ್ಲರಿಗೂ ನಾನು ಆಭಾರಿ. ನನ್ನ ಅನುವಾದ, ಲೇಖನ ಎಲ್ಲವನ್ನೂ ಆಮೂಲಾಗ್ರವಾಗಿ ಓದಿ ಸಲಹೆ ನೀಡಿದ ಮತ್ತು ಭಾಗವತರನ್ನು ಚೆನ್ನಾಗಿ ಬಲ್ಲವರಾದ ನನ್ನ ಹಿರಿಯ ಮಿತ್ರ ಸಂಗೀತರತ್ನಾಕರ, ಕರ್ನಾಟಕ ಕಲಾತಿಲಕ ಇತ್ಯಾದಿ ಬಿರುದಾಂಕಿತರೂ, ವಾಗ್ಗೇಯಕಾರರೂ ಆದ ಆರ್. ಚಂದ್ರಶೇಖರಯ್ಯನವರು ಮುನ್ನುಡಿ ಬರೆದುಕೊಟ್ಟು ಆಶೀರ್ವದಿಸಿದ್ದಾರೆ. ಮೇಲಾಗಿ ಭಾಗವತರ ದತ್ತುಪುತ್ರ ವಿದ್ವಾನ್ ಹೆಚ್. ಎಂ. ವೈದ್ಯಲಿಂಗಂ ಭಾಗವತರು (ಇವರು ಆಂಧ್ರದ ಚಿತ್ತೂರಿನಲ್ಲಿ ನೆಲೆಸಿದ್ದಾರೆ) ಸಂತೋಷ ದಿಂದ ಈ ಗ್ರಂಥವನ್ನು ಹೊರತರಲು ಒಪ್ಪಿಗೆ ಕೊಟ್ಟಿದ್ದಾರೆ. ಇವರೆಲ್ಲರಿಗೂ ನಾನು ಕೃತಜ್ಞ.

ಈ ಕೃತಿಯು ಮುದ್ರಿತವಾಗಿ ಪ್ರಕಟಗೊಳ್ಳಲು ಉದಾರವಾಗಿ ಆರ್ಥಿಕ ನೆರವನ್ನು ನೀಡಿರುವ ಶ್ರೀ ತಿರುಮಲೆ ತಿರುಪತಿ ದೇವಸ್ಥಾನದ ಮುಖ್ಯ ನಿರ್ವಹಣಾಧಿಕಾರಿಗಳಿಗೂ, ಸಂಪಾದಕರಾದ ಶ್ರೀ ಎನ್. ಎಸ್. ರಾಮಮೂರ್ತಿಯವರಿಗೂ ನಾನು ಆಭಾರಿ.

ಪ್ರಕಟನೆಯ ಕಾರ್ಯದ ಜವಾಬ್ದಾರಿಯನ್ನು ಹೊತ್ತು ಈ ಪುಸ್ತಕವನ್ನು ಬೆಳಕಿಗೆ ತಂದಿರುವ ಮೈಸೂರಿನ ಪ್ರಮುಖ ಸಂಸ್ಥೆಯಾದ ಗೀತಾ ಬುಕ್ ಹೌಸ್‌ನ ನನ್ನ ಸನ್ಮಿತ್ರ ಶ್ರೀ ಎಂ. ಸತ್ಯನಾರಾಯಣರಾವ್ ಮತ್ತು ಅವರ ಸಹೋದರರಾದ ಶ್ರೀ ಎಂ. ಗೋಪಾಲಕೃಷ್ಣ ಮತ್ತು ಶ್ರೀ ಎಂ. ಗುರುರಾಜರಾವ್ ಅವರಿಗೂ, ನನ್ನ ಈ ಕೆಲಸದಲ್ಲಿ ಹಲವು ರೀತಿಯಲ್ಲಿ ಸಹಕರಿಸಿರುವ ನನ್ನ ಸೌಭಾಗ್ಯವತಿ ಸಂಗೀತವಿದುಷಿ ಟಿ. ಎಸ್. ಲೀಲಾ, ನನ್ನ ಪುತ್ರ ಚಿ॥ ವಿ. ಎಸ್. ಮೋಹನರಾಮ್ ಮತ್ತು ಸ್ನುಷಾ ಚಿ. ಸೌ. ಅಂಜನಾ ಹಾಗೂ ಪೌತ್ರ ಚಿ॥ ವಿ. ಎಂ. ನಂದಕಿಶೋರ್ ಇವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಖ್ಯಾತ ಮುದ್ರಕರಾದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಅವರಿಗೆ ನಾನು ಆಭಾರಿ. ಈ ಪುಸ್ತಕವನ್ನು ಸಂಗೀತ–ಸಾಹಿತ್ಯ ವಿದ್ವಾಂಸರು ಮತ್ತು ಸಂಗೀತಕಲಾ ರಸಿಕರು ಸಂತೋಷದಿಂದ ಸ್ವಾಗತಿಸುವರೆಂದು ನನಗೆ ದೃಢ ಭರವಸೆಯಿದೆ.

ಶ್ರೀ ತ್ಯಾಗರಾಜಾಯ ದಿವ್ಯಾಜ್ಞಾ
ವರ್ಧತಾಂ ಅಭಿವರ್ಧತಾಂ ॥

## ॥ ಸಮರ್ಪಣಮ್ ॥

ಸೋಽಯಂ 'ಗಾಯಕಶೀರ್ಷಶೋಭಿಮಣಿನಾ' ಮುತ್ತಯ್ಯ ನಾಮಶ್ರಿಯಾ,
ವಿಜ್ಞಾತ್ರಾ ಹರಿಕೇಶದೇಶಜನುಷಾ ಮೈಸೂರ್ ಮಹೀಪಾಲಕೈಃ ।
ವಂಚೇಶೈರಪಿ ಭೂರಿಚಾರು ವಿಭವೈರ್ನಿತ್ಯಾದೃತೇಸೋದಿತೋ
ಗ್ರಂಥಃ ಸಂತತ ಭಕ್ತಿಭಾರಮುದಿತೇ ಶ್ರೀತ್ಯಾಗರಾಜೇಽರ್ಪ್ಯತೇ ॥

ಅನಂತಶಯನಮ್ — ಗಾಯಕ ಶಿಖಾಮಣಿಃ ।

ಡಿಸೆಂಬರ್ ೩, ೧೯೪೦

# ಮುನ್ನುಡಿ—೧*

## ಸಚಿವೋತ್ತಮ ಡಾ. ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್

K.C.S.I, K.C.I.E.

ತಿರುವಾಂಕೂರಿನ ದಿವಾನರು

ಮಹಾವಾಗ್ಗೇಯಕಾರರೂ, ನಿಜಭಕ್ತರೂ, ಸಂತರೂ ಆಗಿದ್ದ ಶ್ರೀ ತ್ಯಾಗರಾಜರ ಜೀವನಚರಿತ್ರೆ ಮತ್ತು ಸಾಧನೆಯನ್ನು ಕುರಿತು ಗಾಯಕ ಶಿಖಾಮಣಿ ಮುತ್ತಯ್ಯ ಭಾಗವತರು ಲಲಿತವಾದ, ಮಧುರವಾದ ಸಂಸ್ಕೃತದಲ್ಲಿ ಬರೆದಿರುವ ಕಾವ್ಯಕ್ಕೆ ಮುನ್ನುಡಿ ಬರೆಯುವುದು ನನಗೆ ಒಂದು ಗೌರವ ಹಾಗೂ ಸಂತೋಷದ ವಿಷಯವಾಗಿದೆ.

ಪಂಡಿತ ವೆಂಕಟರಾಮಶರ್ಮರು ತಮ್ಮ ಉಪೋದ್ಘಾತದಲ್ಲಿ ಹೇಳಿರುವಂತೆ ಈ ಗ್ರಂಥವು ಅನೇಕ ಕಾರಣಗಳಿಂದ ಸಕಾಲಿಕ ಮತ್ತು ಸೂಕ್ತವಾದುದು. ಮುತ್ತಯ್ಯ ಭಾಗವತರೇ ಸ್ವತಃ ದಕ್ಷಿಣ ಭಾರತದ ಸಂಗೀತ ಪರಂಪರೆಯ ಪ್ರಮುಖ ಲಕ್ಷಣ ಮತ್ತು ಲಕ್ಷ್ಯವಿದ್ವಾಂಸರಾಗಿದ್ದಾರೆ. ಇವರು ಗಾಯಕರಾಗಿ ಪ್ರಸಿದ್ಧರಾಗಿರುವರಲ್ಲದೆ, ಹಲವು ಭಾಷೆಗಳಲ್ಲಿ ಪರಿಣತರಾಗಿದ್ದು ಪದ್ಯಗಳು, ಹಾಡುಗಳು ಮತ್ತು ಕೀರ್ತನೆಗಳನ್ನು ಹಿಂದೂಸ್ತಾನಿ, ಕನ್ನಡ, ತಮಿಳು, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸಿದ್ದಾರೆ. ಇವರು ತ್ಯಾಗರಾಜರ ನಿಜಭಕ್ತರು ; ಮತ್ತು ದೂರದೃಷ್ಟಿ ಹಾಗೂ ಔದಾರ್ಯದಿಂದ ಕೂಡಿದ ತಿರುವಾಂಕೂರು ಮಹಾರಾಜ ಮತ್ತು ಮಹಾರಾಣಿ ಸೇತುಪಾರ್ವತೀಬಾಯಿಯವರ ಪೋಷಣೆಯಿಂದ ತಮ್ಮ ಸಹೋದ್ಯೋಗಿಗಳೊಡನೆ ತ್ಯಾಗರಾಜರ ಸಮಕಾಲೀನರಾಗಿದ್ದ ಮಹಾರಾಜ ಸ್ವಾತಿ ತಿರುನಾಳರ ರಚನೆಗಳನ್ನು ಸಂಗ್ರಹ ಮಾಡಿ, ಸಂಪಾದಿಸಿ ಪ್ರಕಟಿಸಿರುವ ಕಷ್ಟತರವಾದ ಕೆಲಸದಲ್ಲಿ ತೊಡಗಿದ್ದಾರೆ. ಸ್ವಾತಿ ತಿರುನಾಳ್ ಮತ್ತು ತ್ಯಾಗರಾಜರಿಗೆ ತಮ್ಮ ರಚನೆಗಳ ಮೂಲಕ ಪರಸ್ಪರ ಪರಿಚಯವಿದ್ದಿತು. ಪ್ರತಿಭಾವಂತರಾದ ರಾಜನ ಬಹುಮುಖ ಸಂಗೀತ ಪ್ರತಿಭೆಯನ್ನು ಮತ್ತು ಅವರ ಇಷ್ಟದೈವದ ಭಕ್ತಿಯನ್ನು ತ್ಯಾಗರಾಜರು ಮೆಚ್ಚಿಕೊಂಡಿದ್ದರು. ಮಹಾರಾಜ ಸ್ವಾತಿ ತಿರುನಾಳರ ಸಂಗೀತದ ಸಾಧನೆಗಳನ್ನು ಪ್ರಚಾರಕ್ಕೆ ತರುವುದರಲ್ಲಿ, ಈಗಿನ ಮಹಾರಾಜರು ಮೂರು ವರ್ಷಗಳ ಹಿಂದೆ ಸ್ಥಾಪಿಸಿದ ಮ್ಯೂಸಿಕಲ್ ಅಕಾಡೆಮಿಯ ಮೂಲಕ ಮುತ್ತಯ್ಯ ಭಾಗವತರು ನಿರತರಾಗಿದ್ದಾರೆ.

ಸ್ವಾತಿ ತಿರುನಾಳರಿಗೂ, ಶ್ರೀ ತ್ಯಾಗರಾಜರಿಗೂ ಇದ್ದ ಸಂಪರ್ಕವನ್ನು ಕುರಿತು ಹೇಳಿರುವ ವಿಷಯವು ಚಾರಿತ್ರಿಕ ಸತ್ಯ ಮಾತ್ರವಲ್ಲ; ಸಾಮಾನ್ಯವಾಗಿ ವಿದ್ವಾಂಸರು

* ಆಂಗ್ಲಭಾಷೆಯಲ್ಲಿನ ಮುನ್ನುಡಿಯ ಕನ್ನಡ ರೂಪಾಂತರ.

ಮತ್ತು ಕಲಾವಿದರಲ್ಲಿ ಅಪರೂಪವಾಗಿರುವ ಔದಾರ್ಯ ಹಾಗೂ ಪರಸ್ಪರ ಮೆಚ್ಚುಗೆ ಯನ್ನೂ ತೋರಿಸುತ್ತದೆ. ತ್ಯಾಗರಾಜರ ವಾಗ್ಗೇಯ ಮತ್ತು ಸಂಗೀತ ಪ್ರತಿಭೆಯನ್ನು ಮತ್ತು ಅವರಿಗೆ ಐಶ್ವರ್ಯದ ಬಗ್ಗೆ ಇದ್ದ ನಿರ್ಮೋಹವನ್ನು ಅರಿತಿದ್ದ ಮಹಾರಾಜ ಸ್ವಾತಿ ತಿರುನಾಳರು ವಿವಿಧ ಭಾಷೆಗಳು ಮತ್ತು ರಾಗಗಳಲ್ಲಿ ರಚಿಸಲ್ಪಟ್ಟ ತಮ್ಮ ಕೆಲವು ರಚನೆ ಗಳನ್ನು ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದ ಷಟ್ಕಾಲ ಗೋವಿಂದ ಮಾರಾರರ ಮೂಲಕ ಹೇಗೆ ಕಳುಹಿಸಿಕೊಟ್ಟರೆಂದೂ, ಮಾರಾರರು ಹಾಡಿದ ಆ ಕೃತಿಗಳನ್ನು ತ್ಯಾಗರಾಜರು ಕೇಳಿ ಮೆಚ್ಚಿಗೆಯನ್ನು ಸೂಚಿಸಿ, ಶುಭಾಶಯಗಳನ್ನು ಕೋರಿ ಒಂದು ಪತ್ರವನ್ನು ಕಳುಹಿಸಿದರೆಂದೂ, ಆ ಪತ್ರವು ತಿರುವಾಂಕೂರಿನ ಪತ್ರಾಗಾರದಲ್ಲಿರುವುದೆಂದೂ ಈ ಕಾವ್ಯದಲ್ಲಿ ನಿರೂಪಿಸಲಾಗಿದೆ.

ದಕ್ಷಿಣ ಭಾರತದ ಸರಿಯಾದ ಸಂಗೀತದ ಮಾಧ್ಯಮವನ್ನು ಕುರಿತು ಏಳುತ್ತಿರುವ ಗೊಂದಲಮಯವಾದ ಈ ಕಾಲದಲ್ಲಿ ಅರ್ಧ ಶತಮಾನಕ್ಕೂ ಹಿಂದೆಯೇ ಸಂಗೀತದ ಮೂಲತತ್ವಗಳು, ಭಾವಗಳು ಇದ್ದಲ್ಲಿ ಕವಿ ಅಥವಾ ಸಂಗೀತಗಾರನು ಯಾವ ಮಾಧ್ಯಮ ಮತ್ತು ವಿಧಗಳನ್ನು ಬಳಸಿದರೂ ಒಂದೇ ಎಂದು ಖ್ಯಾತ ಪಂಡಿತರು ಮತ್ತು ಸಂಗೀತ ವಿದ್ವಾಂಸರು ಮಾನ್ಯ ಮಾಡಿದ್ದರು ಎಂಬುದು ಮನಸ್ಸಿಗೆ ಉತ್ಸಾಹ ಹಾಗೂ ಆಹ್ಲಾದ ವನ್ನು ತರುತ್ತದೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಈ ಕಾವ್ಯದ ಕರ್ತೃವೇ ಈ ವಿಶಾಲದೃಷ್ಟಿಯ ಮೌಲ್ಯಕ್ಕೆ ಉತ್ತಮ ನಿದರ್ಶನ. ತಿರುನೆಲ್ವೇಲಿ ಜಿಲ್ಲೆಯಲ್ಲಿ ಜನಿಸಿ, ಕಾವೇರಿ ಬಯಲಿನ ಬುದ್ಧಿಶಕ್ತಿ ಮತ್ತು ಸಂಗೀತದ ಸೃಜನಶೀಲತೆಯ ಮಹಾಕೇಂದ್ರ ದೊಡನೆ ನಿಕಟ ಬಾಂಧವ್ಯ ಹೊಂದಿ, ಎಲ್ಲಾ ಕಲೆಗಳ ಏಕತೆಯನ್ನು ಅರಿತ ಮುತ್ತಯ್ಯ ಭಾಗವತರು ಈ ಕಾವ್ಯದಲ್ಲಿ ಶ್ರೀ ತ್ಯಾಗರಾಜರ ಜೀವನಚರಿತ್ರೆ ಮತ್ತು ಅವರ ಸಂಗೀತದ ಲಕ್ಷ್ಯ ಮತ್ತು ಲಕ್ಷಣಗಳ ಬಗ್ಗೆ ವಿಮರ್ಶೆಯನ್ನು ಕೊಟ್ಟಿದ್ದಾರೆ. ತ್ಯಾಗರಾಜರು ಬಹಳ ಋಣಿಯಾಗಿದ್ದ ಅವರ ಮಾತಾಪಿತೃಗಳ ಸರಳ ಹಾಗೂ ಸಂತ ಜೀವನಚರಿತ್ರೆಯಿಂದ ಆರಂಭಿಸಿ, ತಂಜಾವೂರಿನ ಷಹಜೀ ಮಹಾರಾಜನ ಕಾಲದಲ್ಲಿ ಆ ದಂಪತಿಗಳು ಐಹಿಕ ಪ್ರಗತಿ ಅಥವಾ ಐಶ್ವರ್ಯದ ಬಗ್ಗೆ ಹೇಗೆ ಮರೆವಿನಿಂದ ಕೂಡಿದವರಾಗಿದ್ದರು, ಹೇಗೆ ಆ ಮನೆತನದ ಕುಲದೇವತೆಯಾದ ರಾಮನ ಪೂಜೆಗೆ ದೀಕ್ಷಾಬದ್ಧರಾದರು ಎಂಬುದನ್ನು ಮುತ್ತಯ್ಯ ಭಾಗವತರು ನಿರೂಪಿಸಿದ್ದಾರೆ. ತ್ಯಾಗರಾಜರು ಪ್ರಸಿದ್ಧ ವೈಣಿಕ ಸೊಂಟಿ ವೆಂಕಟರಮಣಯ್ಯನವರಲ್ಲಿ ಶಿಕ್ಷಣ ಪಡೆದುದು ಮತ್ತು ಅವರು ತಮ್ಮ ಗುರುವಿನಿಂದ ತೆಲುಗು ಮತ್ತು ತಮಿಳು ಭಾಷೆಗಳಲ್ಲಿ ನಿರೂಪಿಸಲ್ಪಟ್ಟ ರಾಗ, ತಾಳ, ಭಾಷೆಗಳ ಲಾಕ್ಷಣಿಕ ಸಂಬಂಧ, ಇವುಗಳನ್ನು ವಿಮರ್ಶೆ ಮಾಡುವ ಅಭ್ಯಾಸ ಇತ್ಯಾದಿಗಳನ್ನು ಹೇಗೆ ಪಡೆದರು ಎಂಬುದರ ವಿವರಣೆ ಓದುಗರ ಮನಸ್ಸನ್ನು ವಿಶೇಷವಾಗಿ ಸೆರೆ ಹಿಡಿಯುತ್ತದೆ. ತೆಲುಗು ತ್ಯಾಗರಾಜರ ಮಾತೃಭಾಷೆಯಾಗಿತ್ತು. ಶ್ರೀಮತಿ ವಿಶಾಲಾಕ್ಷಿಯೊಡನೆ ತ್ಯಾಗರಾಜರ ವಿವಾಹ, ಈ ದಂಪತಿಗಳು ನಡೆಸುತ್ತಿದ್ದ ಸರಳ ಜೀವನ, ಭಕ್ತಿ ಮತ್ತು ಗಾಯನ ಸಹಿತ ಅವರು ಮಾಡುತ್ತಿದ್ದ ನಿತ್ಯಪೂಜೆ, ಇವುಗಳನ್ನು ವಿಶದವಾಗಿ ಪ್ರೇಮ

ದಿಂದ ವಿವರಿಸಲಾಗಿದೆ. ದೈವತ್ವದ ಪ್ರಕಟನೆಗೆ ಸಂಬಂಧಿಸಿದ ವಿಶೇಷ ಸಂದರ್ಭಗಳು ಮತ್ತು ನಾರದರು ಬಂದು ವಿಶೇಷವಾಗಿ ಅನುಗ್ರಹ ಮಾಡಿದ ವಿಷಯಗಳನ್ನು ಈ ಕಾವ್ಯವು ನಿರೂಪಿಸುತ್ತದೆ.

ಶ್ರೀ ತ್ಯಾಗರಾಜರ ಸಾಹಿತ್ಯ ಮತ್ತು ಸಂಗೀತದ ಕೊಡುಗೆಯನ್ನು ಕುರಿತು ಬಹು ಕುಶಲತೆಯಿಂದ ಕೂಡಿದ ನಿರೂಪಣೆಯು ಸಂಗೀತಶಕ್ತಿಯಿಂದ ಕೂಡಿರುವುದಲ್ಲದೆ ಗೀತಶಾಸ್ತ್ರವಾಗಿದೆ. ಗುರುವಿನ ಕೊಡುಗೆಯ ವಿವರಣೆಯು ಉದ್ಧರಿಸಲು ಯೋಗ್ಯವಾಗಿದೆ.

ಆಂಧ್ರ್ಯೈವ ಮಾತೃವಾಚಾಮುಂ ತುಷ್ಟ್ಯಾಪೇಷ್ಟಪ್ರದಂ ಕವಿಃ ।
ಅಸಾರತರ ಸಂಸಾರ ದುರಾಚಾರ ವಿದಾರಿಣೀಃ ॥

ಅಮಂದಗುಣಸಾಂದ್ರ ಶ್ರೀರಾಮಚಂದ್ರಾಭಿವಂದಿನೀಃ ।
ಸಂಸ್ಕೃತ ಪ್ರಚುರಾ ನೂತ್ನಪಥಬದ್ಧಸುಮೇಳಕಾಃ ॥

ದೇಶೀ ಕರ್ಣಾಟ ಸಂಗೀತ ವಿಚಿತ್ರ ಸರಣಿಸ್ಪೃಶಃ ।
ತ್ಯಾಗರಾಜನುತೇತ್ಯಾದಿ ಪದ್ಯೈರಂತೇ ಚ ಮುದ್ರಿತಾಃ ॥

ಅನರಸ್ತೋತ್ರ ಸಂಬಂಧಾ ಅವಿಷ್ಣುಸ್ತುತಿ ವರ್ಜಿತಾಃ ।
ಬಾಲೈರಪಿ ಸುಗಾನಾಂಶಾಃ ಪಂಡಿತೈರಪಿ ದುರ್ಗಮಾಃ ॥

ಆಪಾದಚೂಡ ಚಾರ್ವಂಗೀರ್ವೇದಾಂತಾರ್ಥ ವಿಜೃಂಭಿತಾಃ ।
ಸರ್ವಲಕ್ಷಣಸಂಪನ್ನಾಃ ಸ್ತುತೀ ರಚಿತವಾಂಸ್ತತಃ ॥

ತ್ಯಾಗರಾಜರ ಮತ್ತು ತಂಜಾವೂರಿನ ಶರಭೋಜಿ ಮಹಾರಾಜರ ಸಂಬಂಧ ಮತ್ತು ಐಶ್ವರ್ಯದ ಬಗ್ಗೆ ತ್ಯಾಗರಾಜರ ಉಪೇಕ್ಷೆ, ಇದ್ದಕ್ಕಿದ್ದಂತೆ ರಾಜನ ನಿಗೂಢ ರೋಗ ಮತ್ತು ಅವನ ಪಶ್ಚಾತ್ತಾಪದ ಪರಿಣಾಮ, ತ್ಯಾಗರಾಜರ ಮಹತ್ವದ ಅರಿವು ಹಾಗೂ ಮೆಚ್ಚುಗೆ —ಇವುಗಳ ಕಥೆಯನ್ನು ಸರಳ ಹಾಗೂ ಇಂಪಾದ ಶ್ಲೋಕಗಳಲ್ಲಿ ವರ್ಣಿಸಲಾಗಿದೆ. ತ್ಯಾಗರಾಜರು ತಿರುಪತಿ ಮತ್ತು ಗೋಗ್ರಾಮಗಳಿಗೆ ಕೈಗೊಂಡ ಪ್ರವಾಸ ಹಾಗೂ ತೀರ್ಥಯಾತ್ರೆ ; ಕಳ್ಳರು, ತಲೆ ಒಡೆಯುವವರನ್ನು ಎದುರಿಸಿದಾಗ ಅವರ ನಿಶ್ಚಲತೆ ; ಮಧ್ಯಾರ್ಜುನ ಮತ್ತು ನಾಗಪಟ್ಟಣಕ್ಕೆ ಅವರ ಭೇಟಿ, ಈ ಹಲವು ಸ್ಥಳಗಳಲ್ಲಿ ಅವರ ರಚನೆಗಳು ಮುಂತಾದ ವಿವರಗಳೊಡನೆ ಕಾವ್ಯವು ಮುಕ್ತಾಯಗೊಳ್ಳುತ್ತದೆ. ತಮ್ಮ ಪತ್ನಿಯ ವಿಯೋಗದ ನಂತರ, ನೌಕಾಚರಿತಂ ಮತ್ತು ಪ್ರಹ್ಲಾದ ಭಕ್ತಿ ವಿಜಯದ ರಚನೆಯಾದಂತೆ ತ್ಯಾಗರಾಜರು ಸನ್ಯಾಸವನ್ನು ಸ್ವೀಕರಿಸಿದರು. ಅಮರವಾದ ಸಂಗೀತ ಪರಂಪರೆಯನ್ನು ನಮಗೆ ನೀಡಿದರು. ದುಃಖಪೂರಿತರಾದ ತಮ್ಮ ಶಿಷ್ಯರಿಂದ ಆವೃತರಾಗಿ, ಸಂಪೂರ್ಣ ಪ್ರಜ್ಞಾವಂತರಾಗಿದ್ದು, ಶಾಂತಿಯಿಂದ ಈ ಪ್ರಪಂಚವನ್ನು ಬಿಟ್ಟು ತೆರಳಿದರು.

ಇಡೀ ಕಥೆಯು ಭಕ್ತನಾದ ಶಿಷ್ಯನ ಪೂರ್ಣ ಅರಿವಿನಿಂದ ತುಂಬಿದೆ. ಮೇಲೆ ಹೇಳಿರುವ

ವಿಶಿಷ್ಟವಾದ ಘಟನೆಗಳಿಂದ ಕೂಡಿದ್ದರೂ, ಸರಳ ಪರಿಶುದ್ಧ ಜೀವನ, ಉನ್ನತ ಧ್ಯೇಯ, ಸಾಧನೆಗಳಿಂದ ತ್ಯಾಗರಾಜರ ಜೀವನವು ಕೂಡಿತ್ತು. ಅವರು ಈಗಿನ ದಕ್ಷಿಣ ಭಾರತದ ಸಂಗೀತದ ವೈಭವ, ಹಿರಿಮೆ, ಸಂಗೀತದ ಕುಶಲತೆಯ ವಿಧಾನಗಳ ಅಧ್ವರ್ಯು. ದಕ್ಷಿಣ ಭಾರತದ ಸಂಗೀತ ಕಲೆಯ ಮಹತ್ವ ಮತ್ತು ಕೀರ್ತಿಯು ಅವರು ಹಾಗೂ ಶ್ಯಾಮಾಶಾಸ್ತ್ರಿ, ಮತ್ತು ದೀಕ್ಷಿತರು ಮತ್ತು ಸ್ವಾತಿ ತಿರುನಾಳರಿಂದ ಪ್ರಾಪ್ತವಾಗಿದೆ. ಅವರು ದಕ್ಷಿಣ ಭಾರತದ ಸಂಗೀತವನ್ನು ಸುಭದ್ರ ಹಾಗೂ ಅಮರಗೊಳಿಸಿದರು ; ತೆಲುಗು ಮತ್ತು ಸಂಸ್ಕೃತವನ್ನು ಶ್ರೀಮಂತಗೊಳಿಸಿ ಅವುಗಳನ್ನು ಸಂಗೀತದ ಅತ್ಯುತ್ತಮ ರಾಗ ಹಾಗೂ ವೈವಿಧ್ಯಮಯವಾದ ಹೃದಯಸ್ಪಂದನದ ಮಾಧ್ಯಮವನ್ನಾಗಿ ಮಾಡಿದರು ; ಇವೆಲ್ಲಕ್ಕೂ ಮಿಗಿಲಾಗಿ, ದೃಢಭಕ್ತಿಯ ಸಂಪ್ರದಾಯವನ್ನು ಸ್ಥಾಪಿಸಿದರು. ಆದ್ದರಿಂದ ಅವರ ಹಾಡುಗಳು ಭಕ್ತರಿಗೆ ಮಾರ್ಗದರ್ಶಿಗಳಾಗಿವೆ.

ವಿಷಯ ಮತ್ತು ಕಾವ್ಯದ ರೀತಿ ಮತ್ತು ಭಾರತದ ಒಬ್ಬ ನಿಜವಾದ ನಿರ್ಮಾತೃವಿನ ಜೀವನಚರಿತ್ರೆಯನ್ನು ಮಾನವನು ರೂಪಿಸಿರುವ ಅತ್ಯಂತ ಸುಸಂಸ್ಕೃತ ಭಾಷೆಯಲ್ಲಿ ದಕ್ಷಿಣ ಭಾರತದ ಜನರಿಗೆ ಮನ ಮುಟ್ಟುವಂತೆ ಮಾಡಿದ ರೀತಿಗಾಗಿ ಮುತ್ತಯ್ಯ ಭಾಗವತರು ಅಭಿನಂದನಾರ್ಹರು. ಒಂದು ರಾಷ್ಟ್ರವನ್ನು ನಿರ್ಮಿಸಿ, ಅದರ ಪ್ರತಿಭೆಯನ್ನು ರೂಪಿಸಿ, ಅದರ ಅಂತರಾತ್ಮವು ಸದಾ ಜೀವಂತವಾಗಿರುವಂತೆ ಮಾಡುವವರು ಅದರ ಕನಸುಗಾರರು, ಅದರ ಚಿಂತನಶೀಲರು, ಅದರ ಕವಿಗಳು ಮತ್ತು ಅದರ ಸಂಗೀತ ಕಲಾವಿದರು. ಈ ಗ್ರಂಥವು ಒಬ್ಬ ವಾಗ್ಗೇಯಕಾರ ಹಾಗೂ ಸಂಗೀತ ವಿದ್ವಾಂಸನ ಹಿಂದಿನ ಒಂದು ಮಹಾಚೇತನಕ್ಕೆ ಅರ್ಪಿಸಿರುವ ಉಚಿತವಾದ ಕಾಣಿಕೆಯಾಗಿದೆ.

**ಸಿ. ಪಿ. ರಾಮಸ್ವಾಮಿ ಅಯ್ಯರ್**

# ಮುನ್ನುಡಿ—೨*

## ವಿದ್ಯಾಭೂಷಣ ಪಂಡಿತ ವಿ. ವೆಂಕಟರಾಮಶರ್ಮ

ಸಂಸ್ಕೃತ ಉಪನ್ಯಾಸಕರು, ತಿರುವಾಂಕೂರು ವಿಶ್ವವಿದ್ಯಾನಿಲಯ

ಲಲಿತವೂ ಉದಾರವೂ ಆದ ರಚನೆಯಿಂದ ಮಧುರವಾಗಿದೆ ಈ ತ್ಯಾಗರಾಜ ವಿಜಯ ಎಂಬ ಕಾವ್ಯ. ಶ್ರೀ ತ್ಯಾಗರಾಜಸ್ವಾಮಿಗಳು ಶ್ರೀರಾಮರೂಪಿ ಪರಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಂಡು ಸಮಸ್ತ ಪಾಪಜಾಲವನ್ನು ದೂರಮಾಡಿಕೊಂಡವರು. ಅಮೃತದ ಸವಿಯನ್ನು ಕಡಿಮೆ ಎನಿಸುವ, ಭಕ್ತಿಭಾವದಿಂದ ಉದ್ಗಮಿಸಿದ ತಮ್ಮ ಅಸಂಖ್ಯಾತ ಹಾಡುಗಳಿಂದ ಗಾಯಕರ ಲೋಕವನ್ನು ಅನುಗ್ರಹಿಸಿದವರು. ಅವರು ಪುಣ್ಯಮಯ ಕೀರ್ತಿಯಿಂದ ಜಗತ್ತಿನಲ್ಲೆಲ್ಲಾ ಪ್ರಸಿದ್ಧರಾಗಿದ್ದಾರೆ. ಈ ಕಾವ್ಯವು ತ್ಯಾಗರಾಜಸ್ವಾಮಿಗಳ ಜನ್ಮದಿಂದ ಮೋಕ್ಷಪ್ರಾಪ್ತಿ ಪರ್ಯಂತವಾದ ಚರಿತ್ರೆಯನ್ನು ಎಲ್ಲ ಅಂಶಗಳಲ್ಲೂ ವಿಶಿಷ್ಟವಾಗಿಯೂ ವಿಪುಲವಾಗಿಯೂ ವರ್ಣಿಸುತ್ತದೆ ಎಂಬುದನ್ನು ಅದರ ಹೆಸರೇ ತಿಳಿಸುತ್ತದೆ.

ಈ ಕಾವ್ಯದಲ್ಲಿ ತ್ಯಾಗರಾಜರ ಮಹಿಮೆ ಮತ್ತು ಜೀವಿತಯಾತ್ರೆಯನ್ನು ವರ್ಣಿಸಿರುವುದರಿಂದ ತ್ಯಾಗರಾಜ ವಿಜಯ ಎಂಬ ಹೆಸರು ಉಚಿತವಾಗಿದೆ. ವಿಜಯ ಶಬ್ದಕ್ಕೆ ಉತ್ಕರ್ಷ, ಮಹಿಮೆ ಎಂಬ ಅರ್ಥವಿದೆ. ಈ ಪದವನ್ನು ಮಹಾಪುರುಷರ ಜೀವನಯಾತ್ರೆ ಎಂಬ ಅರ್ಥದಲ್ಲಿ ಪ್ರಯೋಗಿಸಿರುವುದೂ ಉಂಟು. ಸಂಗೀತವಿದ್ಯಾಸರ್ವಸ್ವರಾದ ಶ್ರೀ ತ್ಯಾಗರಾಜಸ್ವಾಮಿಗಳ ಮಹಾನುಭಾವತೆಗೆ ಉಚಿತವಾದ ನಾನಾ ಪ್ರಕಾರದ ಅದ್ಭುತ ಕಾರ್ಯಗಳನ್ನು ಇಂದಿಗೂ ಪೌರರೂ, ಜಾನಪದರೂ ಆದರದಿಂದ ಕೀರ್ತಿಸುತ್ತಿರುವುದು ಕಂಡುಬರುತ್ತದೆ. ಅತಿ ಸಂಕ್ಷಿಪ್ತವೂ, ಅತಿ ವಿಸ್ತಾರವೂ ಅಲ್ಲದ, ಬೇರೆ ಬೇರೆ ವೃತ್ತಾಂತಗಳನ್ನು ತಿಳಿಸುವ, ಏಳು ಸರ್ಗಗಳನ್ನು ಹೊಂದಿರುವ ಲೋಕರಂಜಕವಾದ ಈ ಕಾವ್ಯವು ಹೃದಯದಲ್ಲಿ ಉದಯಿಸುವ ಪರಚಿತ್ ಸ್ವರೂಪನಾದ ಭಗವಂತನ ರೂಪದಿಂದ ಆರ್ದ್ರಹೃದಯರೂ, ವೀತರಾಗರೂ, ಭಕ್ತೋತ್ತಮರೂ ಆದ ಶ್ರೀ ತ್ಯಾಗರಾಜಸ್ವಾಮಿಗಳ ಚರಿತ್ರೆಯನ್ನು ಪೂರ್ಣವಾಗಿ ವರ್ಣಿಸುತ್ತದೆ. ಅನೇಕ ವಿಧವಾದ ಕ್ಲೇಶಜಾಲಗಳಿಂದ ಜಟಿಲವಾದ ಸಂಸಾರವನ್ನು ಅನಿತ್ಯವೆಂದೂ, ಶಬ್ದ ಸ್ಪರ್ಶ ರಸ ಮುಂತಾದ ವಿಷಯೋಪಭೋಗವು ಆಪಾತಮಾತ್ರಮಧುರವೆಂದೂ, ಪ್ರಾಣಗಳು ಹುಲ್ಲೆಸಳಿನ ತುದಿಯಲ್ಲಿ ಇರುವ ನೀರಿನ ಹನಿಗೆ ಸಮಾನವೆಂದೂ, ಈ ಭೂಮಿಯ ಆಧಿಪತ್ಯವು ಗಾಳಿಯಿಂದ ಚದುರಿಸಲ್ಪಡುವ ಮೋಡಕ್ಕೆ ಸಮಾನವಾದ ಸ್ಥಿರತೆಯನ್ನು ಹೊಂದಿರುವುದೆಂದೂ ಚೆನ್ನಾಗಿ ತಿಳಿಸುತ್ತದೆ. ಅನೇಕ ಗುಣಗಳನ್ನು ಅದು ವರ್ಣಿಸುವುದರಿಂದ ಅತ್ಯುತ್ತಮ

---

*ಸಂಸ್ಕೃತ ಭಾಷೆಯಲ್ಲಿನ ಮುನ್ನುಡಿಯ ಕನ್ನಡ ರೂಪಾಂತರ.

ಶ್ರೇಯಸ್ಸಿಗಾಗಿ ಸದಾ ಎಲ್ಲೆಲ್ಲಿಯೂ ಧ್ಯೇಯವಾದ ಬ್ರಹ್ಮವನ್ನು ಈ ಕಾವ್ಯವು ಅರಿವಿಗೆ ತರುತ್ತದೆ.

ಈ ರೀತಿಯಾದ ಈ ಕಾವ್ಯವನ್ನು ರಚಿಸಿರುವ ಶ್ರೀಯುತ ಮುತ್ತಯ್ಯ ಭಾಗವತರು ಸಹಜವಾದ ಪ್ರತಿಭೆಯುಳ್ಳವರು, ಸಂಗೀತ-ಸಾಹಿತ್ಯ-ಲಕ್ಷಣಜ್ಞರಾದ ವಾಗ್ಗೇಯಕಾರರಲ್ಲಿ ಅಗ್ರಗಣ್ಯರು, ಕೀರ್ತಿಯನ್ನು ಗಳಿಸಿದ ಸುಗೃಹೀತ ನಾಮಧೇಯರು, ಶ್ರೇಷ್ಠ ವಿದ್ವಾಂಸರು. ಇವರು ಹರಿಕೇಶನಲ್ಲೂರು ಎಂಬ ಊರಿನವರು ಹಾಗೂ ಎಲ್ಲ ಜನರಿಗೂ ಪರಿಚಿತರು. ಈಗಿನ ಕಾಲದ ಗಾನಕಲಾಕೋವಿದರಲ್ಲಿ ಅಗ್ರಣಿಗಳಾದ ಅವರು ಸಾಹಿತ್ಯ ಶಾಸ್ತ್ರದ ಮರ್ಮಜ್ಞರಿಗೆಲ್ಲಾ ಶಿಖಾಮಣಿಗಳಾಗಿದ್ದಾರೆ. ಅತಿಶಯ ಖ್ಯಾತಿಯನ್ನು ಪಡೆದ ಅವರು ಗಾಯಕ ಶಿಖಾಮಣಿಗಳೆಂದು ಪ್ರಸಿದ್ಧರಾಗಿದ್ದಾರೆ. ಈಗ ಇವರು ಪುರಾಣ ಪ್ರಖ್ಯಾತವಾದ ಈ ಅನಂತಶಯನವೆಂಬ ನಗರದಲ್ಲಿ ಹೊಸದಾಗಿ ಸ್ಥಾಪಿತವಾಗಿರುವ ಸ್ವಾತಿ ಮಹಾರಾಜ ಸ್ಮಾರಕ ಸಂಗೀತ ವಿದ್ಯಾಮಂದಿರದಲ್ಲಿ ಅಧಿಕೃತರಾಗಿದ್ದಾರೆ. ಗರ್ಭಸಾರಸ್ವತರೂ, ಅನೇಕಕಲಾಭಿಜ್ಞರೂ, ಈಗ ಕೀರ್ತಿಶೇಷರೂ ಆದ ಶ್ರೀ ರಾಮವರ್ಮ ಕುಲಶೇಖರ ವಂಚಿ ಮಹಾರಾಜರಿಂದ ರಚಿತವಾದ ಅನೇಕ ಶ್ಲಾಘನೀಯ ಸಂಗೀತ-ಸಾಹಿತ್ಯ ಕೃತಿಗಳಿಗೆ ಸ್ವರಸಂದರ್ಭಗಳನ್ನು ಹಾಕಿ ಎಲ್ಲೆಡೆಯೂ ಅವುಗಳನ್ನು ಪ್ರಚಾರ ಮಾಡುತ್ತಿದ್ದಾರೆ. ಮಹೋನ್ನತ ಮಹಾಮಹಿಮಶಾಲಿ ಶ್ರೀ ಚೈತ್ರಕ ಎಂದು ಪ್ರಸಿದ್ಧರಾದ ನಮ್ಮ ಮಹಾರಾಜ ಬಾಲರಾಮವರ್ಮರ, ಅವರ ತಾಯಿ ಮಹಾಮಹಿಮಶಾಲಿನಿ ಮಹಾರಾಣಿ ಶ್ರೀ ಸೇತುಪಾರ್ವತೀಬಾಯಿಯವರ, ಮಹಾಪ್ರಭಾವರೂ, ವಂಚಿ ಮಂಡಲದ ಆಭರಣದಂತಿರುವವರೂ, ಪಂಡಿತಪ್ರಿಯರೂ, ಸಚಿವೋತ್ತಮರೂ ಆದ ಶ್ರೀಯುತ ಸಿ. ಪಿ. ರಾಮಸ್ವಾಮಿ ಅಯ್ಯರ್‌ರವರ ಅಭಿಮಾನಕ್ಕೂ, ಬಹುಮಾನಕ್ಕೂ, ಕರುಣೆಗೂ ಪಾತ್ರರಾಗಿ ಶ್ರೀ ಮುತ್ತಯ್ಯ ಭಾಗವತರು ವಿರಾಜಿಸುತ್ತಾರೆ.

ಈ ಕಾವ್ಯದ ರಚನೆಯ ವಿಷಯದಲ್ಲಿ ಶ್ರೀ ಭಾಗವತರಿಗೆ ಸಹಕಾರ ನೀಡಿರುವ ಶ್ರೀಯುತ ಉಡುಪಿ ರಂಗನಾಥಾಚಾರ್ಯರು ಪ್ರತ್ಯುನ್ನತಮತಿಗಳು, ವ್ಯುತ್ಪತ್ತಿಯಿಂದ ಪರಿಷ್ಕೃತವಾದ ಬುದ್ಧಿಯುಳ್ಳವರು, ಶಾಸ್ತ್ರಗಳ ಮರ್ಯಾದೆಯನ್ನು ತಿಳಿದವರು ಮತ್ತು ಮೀಮಾಂಸಾ ಶಿರೋಮಣಿ ಪರೀಕ್ಷೆಯಲ್ಲಿ ವಿಜಯವನ್ನು ಪಡೆದವರು. ಅವರು ಇಲ್ಲಿ ಪ್ರಶಂಸಾರ್ಹರು. ಮುತ್ತಯ್ಯ ಭಾಗವತರ ಉಪದೇಶವನ್ನು ವಿಧೇಯತೆಯಿಂದ ನಿರಂತರವಾಗಿ ಕೇಳಿ, ಸೋಮಾರಿತನವಿಲ್ಲದೆ ಪ್ರಯತ್ನ ಮಾಡಿ, ಪ್ರಸನ್ನವೂ ಸುಕುಮಾರವೂ ಆದ ಪದಗಳಿಂದ, ಅಸ್ಖಲಿತ ವಾಕ್ಯಗಳಿಂದ, ಸ್ವಯಂ ಬಂದಂಥ ಅಲಂಕಾರಗಳಿಂದ ಪ್ರತಿಪಾದ್ಯವಾದ ವಿಷಯಗಳನ್ನೆಲ್ಲಾ ವಿಸ್ತಾರವಾಗಿ ತಿಳಿಸಿ, ತಮ್ಮ ಪ್ರತಿಭೆಯಿಂದ ಉದ್ಭವಿಸಿದ ವಿಚಿತ್ರ ಭಂಗಿಭಣಿತಗಳಿಂದ ಈ ಕವಿಶಿಲ್ಪವನ್ನು ಆಮೂಲಾಗ್ರವಾಗಿ ಈ ರೂಪದಲ್ಲಿ ಫಲಿಸುವಂತೆ ಶ್ರೀ ರಂಗನಾಥಾಚಾರ್ಯರು ಮಾಡಿದ್ದಾರೆ.

ಮುತ್ತಯ್ಯ ಭಾಗವತರು ಆಭ್ಯುದಿಕ ಆಗಮಿಕ ಎಂಬ ಎರಡು ಪ್ರಸ್ಥಾನಗಳಲ್ಲೂ ಸಂಗೀತ ವಿದ್ಯೆಯನ್ನು ಆಶ್ರಯಿಸಿಯೇ ತಮ್ಮ ಜೀವಿಕೆಯನ್ನು ಕಳೆದವರು. ಗಾಯಕ

ಕುಲದೈವತರೂ, ಪರಮ ಭಾಗವತರೂ ಆದ ಶ್ರೀ ತ್ಯಾಗರಾಜಸ್ವಾಮಿಗಳ ಸೇವೆಯನ್ನು ಮಾಡಿ ಅವರು ಧನ್ಯರಾಗಲು ಬಯಸಿದವರು. ಸ್ವಯಂ ಸಂಗೀತವಿದ್ಯಾಸಾಮ್ರಾಜ್ಯದಲ್ಲಿ ಹೆಚ್ಚಿನ ಪ್ರತಿಷ್ಠಿತರು. ಅವರು ರಚಿಸಿರುವ ತ್ಯಾಗರಾಜ ವಿಜಯವೆಂಬ ಕಾವ್ಯವು ಪ್ರಾಚೀನ ಛಾಯೆಯನ್ನು ಅನುಸರಿಸಿದ್ದರೂ ಕೂಡ, ಸಕಲ ಕಾವ್ಯಗುಣಗಳಿಂದ ಪುಷ್ಕಳವಾಗಿದೆ. ಅವರ ಪ್ರಯತ್ನವು ಸಮುಚಿತವೂ, ಶ್ಲಾಘನೀಯವೂ ಆಗಿದೆಯೆಂದು ಯಾವ ಸಂದೇಹವೂ ಇಲ್ಲದೆ ಹೇಳುತ್ತೇವೆ. ಸಹೃದಯ ಪರಿತೋಷವನ್ನುಂಟು ಮಾಡಲು ಸಮರ್ಥವಾಗಿ ಈ ಕಾವ್ಯವು ಮೂಡಿಬಂದಿರುವುದರಿಂದ ಅವರ ಮನೋರಥ ಫಲಿಸಿದೆಯೆಂದು ತಿಳಿದಿದ್ದೇವೆ.

ಈ ಕಾವ್ಯವು ಈಗ ಮುದ್ರಿತವಾಗಿ ಪ್ರಕಾಶಗೊಳ್ಳುತ್ತಿದೆ. ಸಮುಚಿತವೂ ಲಲಿತವೂ ಆದ ಸನ್ನಿವೇಶಗಳಿಂದ ಸುಂದರವಾದ, ಲಘು ಟಿಪ್ಪಣಿಗಳಿಂದ ಕೂಡಿದ ಶ್ರೀ ತ್ಯಾಗರಾಜ ವಿಜಯ ಕಾವ್ಯವು ಕೇವಲ ಪ್ರತಿಪಾದ್ಯ ಮಹಿಮೆಯಿಂದ ಮಾತ್ರವಲ್ಲ, ಕರ್ತೃವಿನಲ್ಲಿರುವ ಗುಣಬಹುಮಾನದಿಂದಲೂ ಹೆಚ್ಚಾಗಿ ಅಭಿನಂದನೆಯನ್ನೂ, ಸ್ವೀಕಾರಾರ್ಹತೆಯನ್ನೂ ಗಳಿಸುವುದರಲ್ಲಿ ಸಫಲವಾಗಿದೆ.

ಇತಿ, ವಿದ್ವಜ್ಜನ ವಿಧೇಯ

**ವೆ. ವೆಂಕಟರಾಮ ಶರ್ಮಾ, ವಿದ್ಯಾಭೂಷಣ**

# ಮುನ್ನುಡಿ—೩


## ಕರ್ನಾಟಕ ಕಲಾತಿಲಕ, ಸಂಗೀತ ರತ್ನಾಕರ, ರಾ. ಚಂದ್ರಶೇಖರಯ್ಯ

ಸ್ಥಾಪಕ ಪ್ರಾಂಶುಪಾಲರು, ಶ್ರೀ ವರಲಕ್ಷ್ಮೀ ಅಕಾಡೆಮಿ ಆಫ್ ಫೈನ್ ಆರ್ಟ್ಸ್, ಮೈಸೂರು


ಶ್ರೀಯುತ ಡಾ॥ ವಿ. ಎಸ್. ಸಂಪತ್ಕುಮಾರಾಚಾರ್ಯರೊಡನೆ ೪೨ ವರ್ಷಗಳಿಂದಲೂ ಪರಿಚಯ, ಸ್ನೇಹ, ಗಾಢ ಮೈತ್ರಿಯನ್ನು ಬೆಳೆಸಿಕೊಂಡಿರುವ ನನಗೆ, ಅವರ ಸಾಹಿತ್ಯ ವೈದುಷ್ಯ, ಇತಿಹಾಸಜ್ಞನ ಪ್ರಾಮಾಣಿಕತೆ, 'ಪದವಿಟ್ಟಳಿಪದ ಅಗ್ಗಳಿಕೆ', ಸಾಮಾನ್ಯ ಜನತೆಗೂ ನೇರವಾಗಿ, ಸುಲಭವಾಗಿ ಮನದಟ್ಟಾಗುವ ರೀತಿಯ ಸರಳ ಸುಂದರ ಶೈಲಿಗಳು ಹೆಚ್ಚು ಹೆಚ್ಚು ಪ್ರಿಯವಾಗುತ್ತಾ, ಅವರ ಗ್ರಂಥಗಳಿಗೆ ಮುನ್ನುಡಿ ಬರೆಯುವುದೆಂದರೆ ವಿಶೇಷ ಉತ್ಸಾಹದ ಸಂಗತಿಯಾಗಿದೆ. ಆದರೆ ವೃತ್ತಿಲೇಖಕನಲ್ಲದ ನನ್ನ ಇತಿಮಿತಿಗಳಿಗೆ ಒಳಪಟ್ಟಿದೆ ಈ ಮುನ್ನುಡಿಯ ಬರಹ.

ಸುಸಂಸ್ಕೃತ, ಆರ್ಷೇಯ ವಿದ್ವಾಂಸರ ಪೀಳಿಗೆಯಲ್ಲಿ ಬಂದ ಆಚಾರ್ಯರಿಗೆ ಸಹಜವಾಗಿಯೇ ವಿದ್ಯಾರ್ಜನೆ, ಜ್ಞಾನಸಂಗ್ರಹದ ಬಗ್ಗೆ ವಿಶೇಷ ಒಲವು ಬಾಲ್ಯದಿಂದಲೇ ಮೂಡಿ, ಬೌದ್ಧಿಕ ಪರಿಸರದಲ್ಲಿಯೇ ಪೋಷಿತವಾಗಿ, ಅಭಿವೃದ್ಧಿ ಹೊಂದಿ, ಅವರ ವ್ಯಕ್ತಿತ್ವವು ಸರ್ವತೋಮುಖವಾಗಿ ವಿಕಸಿಸಿತು. ಅವರಲ್ಲಿ ಸುಪ್ತವಾಗಿದ್ದ ಸಂಗೀತ-ಸಾಹಿತ್ಯ ಗಂಧರ್ವಾಂಶವು ಅಸ್ಖಲಿತವಾದ, ಅವಿರತ ಅಧ್ಯಯನದಿಂದ ಪ್ರಖರಗೊಂಡು, ಹವ್ಯಾಸವಾಗಿ ಪ್ರಾರಂಭವಾದ ಸಂಗೀತಕಲೆ-ಶಾಸ್ತ್ರದ ಆಸಕ್ತಿ, ಇಂದು ಅವರ ಬೌದ್ಧಿಕ ಜೀವನದ ಹಾಸುಹೊಕ್ಕಾಗಿ, ಅನಿವಾರ್ಯತೆಯ ಮಟ್ಟಕ್ಕೇರಿದೆ. ಅವರು ಸಂಗೀತ-ಸಾಹಿತ್ಯದ ಅಧ್ಯಯನದಲ್ಲಿ ಅವಲಂಬಿಸಿದ ಐತಿಹಾಸಿಕ ವಾಸ್ತವಿಕತೆ, ವಿಶ್ಲೇಷಣ ಪ್ರವೃತ್ತಿ, ಸಂಶೋಧನಾಸಕ್ತಿಗಳಿಂದಾಗಿ, ಇಂದು ಬಹುಮೌಲ್ಯಾಧಾರಿತ ಗ್ರಂಥಗಳು ರಚಿತವಾಗಿವೆ. ಇವು ಸಂಗೀತ ಕ್ಷೇತ್ರಕ್ಕೂ, ಕಲಾಭಿಜ್ಞ, ಕಲಾಭಿಮಾನಿ, ರಸಿಕ ಜನತೆಗೂ ವಿಕಸಮನಾಗಿ ಉಪಯುಕ್ತವಾಗಿವೆ. ಕೆಲವನ್ನು ಉದಹರಿಸಬಹುದು : (೧) 'ಕರ್ನಾಟಕ ಸಂಗೀತ ಸುಧಾ' (ಪ್ರೊ. ವಿ. ರಾಮರತ್ನಂರವರೊಡನೆ). (೨–೩) 'ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ'—ಇದು ಅಕಾರಾದಿ ಕ್ಷಕಾರಾಂತ ಸಂಗೀತ ವಿಶ್ವಕೋಶ–ಎರಡು ಸಂಪುಟಗಳಲ್ಲಿ (೧೯೮೩, ೧೯೮೬)—ಕರ್ನಾಟಕ ಸಂಗೀತಕ್ಕೆ, ಅದನ್ನು ಅನುಷ್ಠಿಸುವವರಿಗೆ ಆಕರ ಗ್ರಂಥ. ಗ್ರಂಥಕರ್ತರಿಗೆ ಮೊದಲಿನಿಂದಲೂ ಸಂಗೀತ ಸಂತಶ್ರೇಷ್ಠರಾದ ಶ್ರೀ ತ್ಯಾಗರಾಜರ ಬಗ್ಗೆ ವಿಶೇಷ ಒಲವು, ಭಕ್ತಿ, ಗೌರವ. ಇದರ ಫಲಶ್ರುತಿಯೇ (೪) 'ಸದ್ಗುರು ತ್ಯಾಗರಾಜರು—ಜೀವನ, ಸಾಧನೆ, ಕೊಡುಗೆ' (೧೯೮೯). ಈ ಗ್ರಂಥವು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಗಳಿಸಿದೆ. ತ್ಯಾಗರಾಜರ ಎಲ್ಲಾ ಕೃತಿಗಳನ್ನೂ ಕನ್ನಡ ಲಿಪಿಯಲ್ಲಿ, ಭಾವಾರ್ಥ, ವಿಶೇಷ ವಿವರಣೆಗಳೊಡನೆ ಅಕಾರಾದಿ ಕ್ರಮದಲ್ಲಿ (೫) 'ಶ್ರೀ ತ್ಯಾಗರಾಜ ಕೃತಿ

ಮಂಜರಿ' ಮೊದಲನೆಯ ಸಂಪುಟ (೧೯೬೨), (೬) ಎರಡನೆಯ ಸಂಪುಟ (೧೯೬೩), ಇವು ಗಳಲ್ಲಿ ಹೊರತಂದಿದ್ದಾರೆ. (7) ಸಾಮಾನ್ಯರೂ ಸಂಗೀತವನ್ನು ಸವಿಯಲು ಸಾಧ್ಯವಾಗು ವಂತೆ ಸುಲಭ ಟಿಪ್ಪಣಿಗಳನ್ನೊಳಗೊಂಡ 'ಸಂಗೀತ ರಸಿಕ ರಂಜನಿ' ಗ್ರಂಥವೂ (೧೯೬೩), ಸಂಗೀತ ಕ್ಷೇತ್ರಕ್ಕೆ ಒಂದು ವಿಶೇಷ ಕೊಡುಗೆಯೇ ಆಗಿದೆ.

ಈ ಸಾಧನೆಯ ಸಂಪತ್ತಿನ ಸೌಧ ಶೃಂಗದೋಪಾದಿಯಲ್ಲಿ ಶ್ರೀ ಆಚಾರ್ಯರ ಪ್ರಸ್ತುತ ಗ್ರಂಥವು ರಚಿತವಾಗಿದೆ. ಭಾರತದ ದಕ್ಷಿಣಾಪಥದ ಕರ್ನಾಟಕ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ತಮ್ಮ ಭವ್ಯ ವ್ಯಕ್ತಿತ್ವದ ಹೊನಲನ್ನು ಹರಿಸಿ ಯಶಃಕಾಯರಾದ ಹರಿಕೇಶನಲ್ಲೂರು ಡಾ॥ ಎಲ್. ಮುತ್ತಯ್ಯ ಭಾಗವತರು ಹಲವು ವರ್ಷಗಳ ಕಾಲ ಮೈಸೂರು ಆಸ್ಥಾನ ಸಂಗೀತವಿದ್ವಾಂಸರಾಗಿ ನಮ್ಮಗಳ ಮಧ್ಯದಲ್ಲಿ ಬಹುಕಾಲ ಇದ್ದವರು ; ನಮಗೆಲ್ಲಾ ನಿಕಟವಾದ ಸಂಪರ್ಕ. ಸಂಗೀತವೇದಿಕೆಗಳಲ್ಲಿ ಎಷ್ಟು ಮಾನ್ಯರೋ, ಅದಕ್ಕಿಂತ ಕಿಂಚಿತ್ತೂ ಕಡಿಮೆ ಇಲ್ಲದಂತೆ ಹರಿಕಥಾ ಕಾಲಕ್ಷೇಪ ಮಹಾ ವಿದ್ವಾಂಸರಾಗಿ ಚಿರಪರಿಚಿತರಾದವರು. ಅವರದು ಭವ್ಯ, ಆಕರ್ಷಕ, ಸುಂದರ ವ್ಯಕ್ತಿತ್ವ. ಅವರ ಹರಿಕಥಾ ಕಾಲಕ್ಷೇಪಗಳ, ಅಪರೂಪವಾದ ಸಂಗೀತದ ವಿನಿಕೆಗಳು ನನ್ನ ಪೂರ್ವ ಪುಣ್ಯದಿಂದ ನನಗೆ ಲಭಿಸಿದ್ದುವು. ನಮ್ಮ ತಂದೆಯವರು ಅರಮನೆಯಲ್ಲಿ ಮಹಾರಾಜರ ಸನ್ನಿಧಿಯ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದುದರಿಂದಲೋ ಅಥವಾ ಶ್ರೀ ಭಾಗವತರ ಗೃಹಕ್ಕೆ ನಮ್ಮ ಮನೆಯು ತೀರಾ ಸಮೀಪದಲ್ಲಿದ್ದುದರಿಂದಲೋ, ಈ ಸದವಕಾಶಗಳು ನನಗೆ ದೊರೆತವು. ಅರ್ಧ ಶತಮಾನಕ್ಕೂ ಹಿಂದಿನ ಮಾತು. ಭವ್ಯ, ನೂತನ ಶಂಕರ ಮಠದಲ್ಲಿ ಶ್ರೀ ಭಾಗವತರ ಕಥಾಕಾಲಕ್ಷೇಪ. ಅರಮನೆಯ ಹಲವು ಮೇಲಧಿಕಾರಿಗಳೂ ಸೇರಿದಂತೆ ಕಿಕ್ಕಿರಿದ ರಸಿಕ ಶ್ರೋತೃವೃಂದ. ರಾರಾಜಿಸುತ್ತಿದ್ದ ಪೀತಾಂಬರವನ್ನುಟ್ಟು, ಅಗಲವಾಗಿ ಮಡಿಸಿದ ಜರಿ ಅಂಗವಸ್ತ್ರವನ್ನು ಎರಡು ಭುಜಗಳ ಪಾರ್ಶ್ವದಿಂದ ಇಳಿಬಿಟ್ಟು, ರತ್ನಾಭರಣಗಳಿಂದ ಅಲಂಕೃತರಾಗಿ, ತಲೆಯಲ್ಲಿ ಜರಿ ಪೇಟವನ್ನು ಧರಿಸಿ, ಕೈಗಳಲ್ಲಿ ಕಂಚಿನ ತಾಳಗಳನ್ನು ಹಿಡಿದು, ಆಸ್ಥಾನ ವಿದ್ವಾಂಸರುಗಳ ಪಿಟೀಲು, ಮೃದಂಗ, ಉಪತಾಳ ವಾದ್ಯಗಳ ಅನುಸರಣೆಯೊಡನೆ ಕಥೆಯ ಪೀಠಿಕೆಯನ್ನು ಆರಂಭಿಸಿ, ಗಂಭೀರವಾದ ಸಮುದ್ರಘೋಷದಂತೆ, ಮಂದ್ರಧ್ವನಿಯಿಂದ, ಸಾಂಪ್ರದಾಯಿಕ ಶೈಲಿಯಲ್ಲಿ ಹಾಡಲು ಕ್ರಮಿಸಿದ ಚಿತ್ರಣ ಇನ್ನೂ ನನ್ನ ಮನೋಪಟಲದಲ್ಲಿ ಹಚ್ಚಹಸುರಾಗಿ ನಿಂತಿದೆ. ಅವರ ಸಂಗೀತವೂ ಬಹು ಸಂಪ್ರದಾಯಬದ್ಧ, ಅಪ್ಪಟ ಶಾಸ್ತ್ರೀಯ ! ಭಾಗವತರು ಮಹಾನ್ ವಾಗ್ಗೇಯಕಾರರು. ನನ್ನ ತಂದೆಯವರಿಗೆ ಬೇಕಾಗಿದ್ದವರೂ, ಶ್ರೇಷ್ಠ ಕವಿಗಳೂ, ನನ್ನಲ್ಲಿ ವಿಶೇಷವಾದ ವಾತ್ಸಲ್ಯ, ಪ್ರೀತಿಗಳನ್ನು ಬೆಳೆಸಿಕೊಂಡಿದ್ದವರೂ ಆದ ವಿದ್ವಾನ್ ದೇವೋತ್ತಮ ಜೋಯಿಸರು ಭಾಗವತರ ನಿವಾಸಕ್ಕೆ ಪದೇಪದೇ ಹೋಗಿಬರುತ್ತಿದ್ದರು. ಅವರ ಸಂಗಡ ನಾನೂ ಅನೇಕ ಸಲ ಹೋಗಿ ಬರುತ್ತಿದ್ದುದುಂಟು. ಬೇರೆಯಾಗಿಯೂ ನಾನು ಹೋಗುತ್ತಿದ್ದೆನು. ಅದರಿಂದಾಗಿ, ನನ್ನಲ್ಲಿ ಭಾಗವತರ ದಿವ್ಯ ವ್ಯಕ್ತಿತ್ವ, ಪಾಂಡಿತ್ಯ, ವರ್ಚಸ್ಸುಗಳು ಅಚ್ಚಳಿಯದ ಮುದ್ರೆಯನ್ನೊತ್ತಿದುವು. ಅರಮನೆಯ ದರ್ಬಾರಿನಲ್ಲಿ

ಅಭಿಮಾನಿಯವರಾಗಿದ್ದುದರಿಂದ ದೊರೆತ ವಿಶೇಷ ಅವಕಾಶಗಳಿಂದ ಇದು ಸಾಧ್ಯವಾಯಿತು.

ನನಗೆ, ಭಾಗವತರ ಭಕ್ತಕೋಟಿಗೆ ಅವರು ರಚಿಸಿದ ಕೃತಿಗಳು, ದೇವೀ ಉಪಾಸನೆ, ಸಂಗೀತ-ಕಥಾಕಾಲಕ್ಷೇಪಗಳಲ್ಲಿನ ಪಾಂಡಿತ್ಯ, ನಿರೂಪಣಾತಂತ್ರ, ಅವರ ಮೇರುಕೃತಿ ಲಕ್ಷಣಗ್ರಂಥವಾದ 'ಸಂಗೀತಕಲ್ಪದ್ರುಮ'ದಲ್ಲಿ ತೋರಿರುವ ಅವರ ಅಪಾರ ಲಕ್ಷಣ ಜ್ಞಾನ—ಮುಂತಾದ ವಿಷಯಗಳ ಸ್ಥೂಲ ಅರಿವು ಇದ್ದರೂ, ಭಾಗವತರು ತ್ಯಾಗರಾಜರನ್ನು ಕುರಿತು ಸುಂದರ ಸಂಸ್ಕೃತ ಕಾವ್ಯವನ್ನು ರಚಿಸಿರುವ ವಿಷಯವೇ ತಿಳಿಯದು.

ನಮ್ಮ ಡಾ॥ ಸಂಪತ್ಕುಮಾರಾಚಾರ್ಯರಿಗೆ ಡಾ॥ ಮುತ್ತಯ್ಯ ಭಾಗವತರ 'ಶ್ರೀಮತ್ತ್ಯಾಗರಾಜವಿಜಯಂ' ಸಂಸ್ಕೃತ ಕಾವ್ಯಗ್ರಂಥವು ದೊರೆತುದು, ಅದನ್ನು ಕನ್ನಡ ಭಾಷೆಯಲ್ಲಿ ಭಾವಾರ್ಥದೊಡನೆ ಅನುವಾದಿಸಬೇಕೆಂಬ ಪ್ರೇರಣೆಯುಂಟಾದದ್ದು ಆಚಾರ್ಯರು ತ್ಯಾಗರಾಜರಿಗೆ ಸಲ್ಲಿಸಿರುವ ಸೇವೆಯನ್ನು ಮೆಚ್ಚಿ ಶ್ರೀ ತ್ಯಾಗರಾಜರು ನೀಡಿರುವ ವರವೆನ್ನಿಸುತ್ತದೆ. ಭಾಗವತರು ನಮಗಿಂತ ಹಿಂದಿನವರು. ತ್ಯಾಗರಾಜರ ಕಾಲಸಾಮೀಪ್ಯವನ್ನು ಹೊಂದಿದ್ದವರು. ತ್ಯಾಗರಾಜರ ಬಗ್ಗೆ ಅನೇಕ ಯಥಾರ್ಥ ಮಾಹಿತಿಗಳನ್ನು ದೊರಕಿಸಿಕೊಂಡವರು. ಬಹು ಸಾಂಪ್ರದಾಯಿಕವಾಗಿ ಪುರಾಣಗಳಲ್ಲಿನ ಆಖ್ಯಾಯಿಕೆಗಳ ತದ್ರೂಪವಾಗಿ ಈ ಕಾವ್ಯವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದರು. ಆದರೂ ಈ ಸಂಸ್ಕೃತ ಕಾವ್ಯವು ಸಾಮಾನ್ಯ ಸಂಗೀತಾಭಿಮಾನಿಗಳನ್ನು, ತ್ಯಾಗರಾಜ ಭಕ್ತಕೋಟಿಯನ್ನು ಸಂಪರ್ಕಿಸಲಾಗಲಿಲ್ಲವೆನಿಸುತ್ತದೆ. ಭಾಗವತರ ಈ ಅಮೋಘ ಮೇರು ಕೃತಿಯ ಮಹತ್ವದ ಬಗ್ಗೆ ವ್ಯಾಪಕ ಪ್ರಚಾರವಾಗಲಿಲ್ಲ. ಸ್ವತಃ ಶ್ರೇಷ್ಠ ವಾಗ್ಗೇಯಕಾರರಾಗಿದ್ದ ಭಾಗವತರು ತನ್ನ ಗುರು-ದೈವವೆಂದು ಪರಿಗಣಿಸಲ್ಪಟ್ಟ ಸಂತ ವಾಗ್ಗೇಯಕಾರ ತ್ಯಾಗರಾಜರ ಬಗ್ಗೆ ತಳೆದ ಭಕ್ತಿ, ಪೂಜ್ಯತೆ, ದೈವಜ್ಞತೆಗಳನ್ನು ಸಾಮಾನ್ಯರಿಗೂ ಅರಿವಾಗಿಸಲೆಂದೇ ಶ್ರೀ ಆಚಾರ್ಯರು ಈ ಸಂಸ್ಕೃತ ಕಾವ್ಯವನ್ನು ಕನ್ನಡ ಭಾಷೆಗೆ ಅನುವಾದಿಸಿರುವುದು ಸ್ತುತ್ಯವಾಗಿದೆ. ತ್ಯಾಗರಾಜರ ಬಗ್ಗೆ ಅಧಿಕೃತವಾಗಿ ತಿಳಿಸಬಲ್ಲ ಅರ್ಹತೆಯುಳ್ಳ ಶ್ರೀ ಆಚಾರ್ಯರು, ಭಾಗವತರು ಚಮತ್ಕಾರವಾಗಿ ಸಪ್ತಸ್ವರನಾಮಕ-ಸಪ್ತಸರ್ಗಗಳಲ್ಲಿ ನಿರೂಪಿಸಿರುವ, ಐತಿಹಾಸಿಕ ಯಥಾರ್ಥತೆಯುಳ್ಳ, ತ್ಯಾಗರಾಜರ ಚರಿತ್ರೆಯನ್ನು ಮೂಲಗ್ರಂಥದ ಪ್ರಾಮಾಣ್ಯಕ್ಕೆ, ಭಾವಕ್ಕೆ, ಶೈಲಿಗೆ ಕುಂದಾಗದಂತೆ, ಚೊಕ್ಕವಾಗಿ, ಸರಳಸುಂದರವಾದ ಶೈಲಿಯಲ್ಲಿ ಕನ್ನಡ ಭಾಷೆಗೆ ಅನುವಾದಿಸಿರುವ ಮಹತ್ಕಾರ್ಯವು ಸಂಗೀತಪ್ರಪಂಚಕ್ಕೆ ಮಹತ್ವದ ಕೊಡುಗೆಯಾಗಿದೆ ಮತ್ತು ಸಂತನೇ ದೈವಸದೃಶ–ಪೂಜ್ಯ ಎಂಬ ಸೂಕ್ತಿಗೆ ಪೋಷಕವಾಗಿದೆ. ಈ ಅನುವಾದ ಗ್ರಂಥವು ಸಾಮಾನ್ಯನನ್ನು ನೇರವಾಗಿ ಸಂಪರ್ಕಿಸಿ, ಅವನು ಗ್ರಂಥದಲ್ಲಿರುವ ಎಲ್ಲಾ ವಿಷಯಗಳ ಬಗ್ಗೆ ಅರಿತು, ಸುಪ್ರತಿಕ್ರಿಯೆಯನ್ನು ಬೆಳೆಸಿಕೊಂಡು ಧನ್ಯತೆಯನ್ನು ಹೊಂದಲು ಸಾಧನವಾಗಿದೆ. ಆ ದೃಷ್ಟಿಯಿಂದಲೂ

ಈ ಅನುವಾದ ಗ್ರಂಥವು ಸಮಾಜ, ಸಂಸ್ಕೃತಿ, ಸಂಗೀತಪ್ರಪಂಚಕ್ಕೆ ಅಮೂಲ್ಯವಾದ ಕೊಡುಗೆಯೆನ್ನುವುದರಲ್ಲಿ ಸಂದೇಹವಿಲ್ಲ.

ಡಾ॥ ಸಂಪತ್ಕುಮಾರಾಚಾರ್ಯರ ಸಾರಸ್ವತ ಸೇವೆಯನ್ನು ಸಮಾಜ, ಸರ್ಕಾರಗಳು ಈಗಾಗಲೇ ಸಾಕಷ್ಟು ಗುರುತಿಸಿರುವುದು ಸಮ್ಮುದಿಯ ಸಂಗತಿ. ಇತ್ತೀಚಿಗೆ ಸರ್ಕಾರವು 'ಕರ್ನಾಟಕ ಕಲಾತಿಲಕ' ಎಂಬ ಬಿರುದನ್ನಿತ್ತು, ಪ್ರಶಸ್ತಿಯನ್ನಿತ್ತು ಗೌರವಿಸಿದೆ. ನಾಡಿನ ಪ್ರಮುಖ ಸಾಂಸ್ಕೃತಿಕ-ಸಂಗೀತ ಸಂಸ್ಥೆಗಳೂ ಶ್ರೀಯುತರಿಗೆ ಹಿರಿಯ ಸನ್ಮಾನಗಳನ್ನು ನೀಡಿವೆ. ಡಾ॥ ಆಚಾರ್ಯರು ಇತೋಪ್ಯತಿಶಯವಾಗಿ ಸಂಗೀತ-ಸಾಹಿತ್ಯ ಸರಸ್ವತಿಯ ಸೇವೆಯನ್ನು ಅವಿಶ್ರಾಂತವಾಗಿ ಎಸಗಲಿ. ರಾಷ್ಟ್ರವ್ಯಾಪಕ ಪ್ರಶಸ್ತಿ, ಸನ್ಮಾನಗಳು ಅವರಿಗೆ ಪ್ರಾಪ್ತವಾಗಲಿ ; ಅದಕ್ಕೆ ಮೂಲಭೂತವಾಗಿ ಪೂರ್ಣಾಯುಸ್ಸು, ಆರೋಗ್ಯ, ಸಂಪತ್ತು, ಸಮೃದ್ಧಿಗಳನ್ನು ಅವರಿಗೂ, ಅವರ ಕುಟುಂಬದವರಿಗೂ, ನನ್ನ ಆರಾಧ್ಯದೈವ ಶ್ರೀ ಲಲಿತಾ ಮಹಾತ್ರಿಪುರಸುಂದರಿಯು ಅನುಗ್ರಹಿಸಲಿ ಎಂದು ಶ್ರೀಮಾತೆಯಲ್ಲಿ ಅನನ್ಯ ಭಕ್ತಿಯಿಂದ ಬೇಡಿ, ನನ್ನ ಆಪ್ತಮಿತ್ರರು ಹಾಗೂ ಗ್ರಂಥಕರ್ತ ಡಾ॥ ಸಂಪತ್ಕುಮಾರಾಚಾರ್ಯರಿಗೆ ನನ್ನ ಆಶೀರ್ವಾದಪೂರ್ವಕ ಶುಭ ಹರಕೆಗಳನ್ನು ಕೋರುತ್ತೇನೆ.

'ವರ್ಧತಾಂ, ಅಭಿವರ್ಧತಾಂ, ಚಿರಮಭಿವರ್ಧತಾಂ.'

'ಮಹಾಶಿವರಾತ್ರಿ'
ಮೈಸೂರು-೫೭೦ ೦೨೪
ಫೆಬ್ರುವರಿ ೨೭, ೧೯೯೫

**ರಾ. ಚಂದ್ರಶೇಖರಯ್ಯ**

# ಹರಿಕೇಶನಲ್ಲೂರು ಮುತ್ತಯ್ಯ ಭಾಗವತರು
## (ಕ್ರಿ.ಶ. ೧೮೭೭–೧೯೪೫)

ತಮಿಳುನಾಡಿನಿಂದ ಕನ್ನಡನಾಡಿಗೆ ಬಂದು ತಮ್ಮ ಪ್ರತಿಭೆ, ಪಾಂಡಿತ್ಯ, ವ್ಯಕ್ತಿತ್ವ ಮತ್ತು ಗೇಯ ರಚನೆಗಳಿಂದ ಸುಮಾರು ಅರ್ಧ ಶತಮಾನದ ಕಾಲ ಪ್ರಭಾವ ಬೀರಿದ ವಿದ್ವಾಂಸರೆಂದರೆ ಗಾಯಕಶಿಖಾಮಣಿ ಮುತ್ತಯ್ಯ ಭಾಗವತರು. ಇವರು ೧೮೭೭ರ ನವೆಂಬರ್ ೧೫ನೇ ದಿನಾಂಕ ತಮಿಳುನಾಡಿನ ಶ್ರೀವಿಲ್ಲಿಪುತ್ತೂರಿನ ಸಮೀಪದಲ್ಲಿರುವ ಪುನರ್‌ವೇಲಿ ಎಂಬ ಗ್ರಾಮದಲ್ಲಿ ಲಿಂಗಂ ಅಯ್ಯರ್ ಮತ್ತು ಆನಂದಮ್ಮಾಳ್ ಎಂಬ ದಂಪತಿಗಳ ಪುತ್ರರಾಗಿ ಜನಿಸಿದರು. ಆರನೆಯ ವಯಸ್ಸಿನಲ್ಲಿ ಪಿತೃವಿಯೋಗವಾಯಿತು. ನಂತರ ಸೋದರಮಾವ ಮಹಾಮಹೋಪಾಧ್ಯಾಯ ಲಕ್ಷ್ಮಣ ಸೂರಿಯವರ ಪೋಷಣೆಯಲ್ಲಿ ಹರಿಕೇಶನಲ್ಲೂರಿನಲ್ಲಿ ಬೆಳೆದರು. ೧೮೮೭ರಲ್ಲಿ ತಿರುವೈಯ್ಯಾರಿನಲ್ಲಿ ಮುತ್ತುಗಣಪತಿಗಳ ಬಳಿ ವೇದಾಧ್ಯಯನ ಮಾಡಲು ತೊಡಗಿದರು.

ಆ ಕಾಲದಲ್ಲಿ ಖ್ಯಾತ ಸಂಗೀತ ವಿದ್ವಾಂಸರಾಗಿದ್ದ ಮಹಾವೈದ್ಯನಾಥ ಅಯ್ಯರ್ ಮತ್ತು ಪಟ್ಟಿಣಂ ಸುಬ್ರಹ್ಮಣ್ಯ ಅಯ್ಯರ್ ತಿರುವೈಯ್ಯಾರಿನಲ್ಲಿ ವಾಸಿಸುತ್ತಿದ್ದರು. ಅವರ ಸಂಗೀತದಿಂದ ಆಕರ್ಷಿತರಾಗಿ ಶಾಸ್ತ್ರೀಯ ಕರ್ನಾಟಕ ಸಂಗೀತವನ್ನು ಕಲಿಯಲು ತೊಡಗಿದರು. ಸದ್ಗುರು ತ್ಯಾಗರಾಜರ ಶಿಷ್ಯಪರಂಪರೆಗೆ ಸೇರಿದ, ಪಲ್ಲವಿ ದೊರೆಸ್ವಾಮಿ ಅಯ್ಯರವರ ಪೀಳಿಗೆಯವರಾದ, ಪಿಟೀಲು ವಿದ್ವಾಂಸರಾಗಿದ್ದ ಸಾಂಬಶಿವ ಅಯ್ಯರ್‌ರವರಲ್ಲಿ ಸಂಗೀತದಲ್ಲಿ ಪ್ರೌಢಶಿಕ್ಷಣವನ್ನು ಪಡೆದರು. ಇದಕ್ಕೆ ಮೊದಲು ಅಪ್ಪಕುಡಂ ಶಾಸ್ತ್ರಿಗಳಲ್ಲಿ ಸಂಗೀತ ಶಿಕ್ಷಣ ಪಡೆದಿದ್ದರು. ಸಾಂಬಶಿವ ಅಯ್ಯರ್‌ರವರಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿ ೧೮೯೩ರಲ್ಲಿ ಹರಿಕೇಶನಲ್ಲೂರಿಗೆ ಹಿಂತಿರುಗಿ ಮೂರು ವರ್ಷಗಳ ಕಾಲ ಶಾರೀರದ ಸಂಸ್ಕಾರ ಮತ್ತು ಅಕಾರ ಸಾಧನಕ್ಕೆ ವಿಶೇಷ ಗಮನವಿತ್ತು ಸಂಗೀತಾಭ್ಯಾಸ ಮಾಡಿದರು. ಅವರ ಶಾರೀರವು ವ್ಯಾಪ್ತಿಯುಳ್ಳ ಶ್ರೀಮಂತಿಕೆಯಿಂದ ಕೂಡಿದ, ಅದರಲ್ಲೂ ತಾನ ಹಾಡುವುದರಲ್ಲಿ ವೈಶಿಷ್ಟ್ಯತೆಯಿಂದ ಕೂಡಿದ್ದುದಾಯಿತು.

ಭಾಗವತರು ಕಚೇರಿ ಗಾಯನ ಮಾಡಲು ತೊಡಗಿ ಶೀಘ್ರಕಾಲದಲ್ಲೇ ತಿರುನೆಲ್ವೇಲಿಯ ಒಬ್ಬ ಪ್ರಸಿದ್ಧ ಗಾಯಕರೆನಿಸಿಕೊಂಡರು. ೧೮೯೭ರಲ್ಲಿ ತಿರುವಾಂಕೂರಿನ ಮಹಾರಾಜ ಮೂಲಂ ತಿರುನಾಳರ ಸಮ್ಮುಖದಲ್ಲಿ ಹಾಡಿದ್ದನ್ನು ಬಹುವಾಗಿ ಮೆಚ್ಚಿಕೊಂಡ ಮಹಾರಾಜರು ಇವರ ಪ್ರತಿಭೆಯನ್ನು ಪ್ರಶಂಸಿಸಿ, ರಾಜ್ಯದ ಉನ್ನತ ಗೌರವಗಳನ್ನಿತ್ತು ಸನ್ಮಾನಿಸಿದರು. ನಂತರ ತಿರುವಾಂಕೂರು, ರಾಮನಾಡ್, ತೂತ್ತುಕ್ಕುಡಿ ಮುಂತಾದ ಕಡೆಗಳಲ್ಲೆಲ್ಲಾ ಕಚೇರಿ ಗಾಯನ ಮಾಡಿ ಮತ್ತಷ್ಟು ಖ್ಯಾತರಾದರು.

೧೯೦೪ರಲ್ಲಿ ಮುತ್ತಯ್ಯ ಭಾಗವತರ ಜೀವನದಲ್ಲಿ ಮತ್ತೊಂದು ಅಧ್ಯಾಯ ಪ್ರಾರಂಭ

ವಾಯಿತು. ತಂಜಾವೂರು ಕೃಷ್ಣ ಭಾಗವತರು ಕಾಲವಾದುದರಿಂದ ಹರಿಕಥಾ ಕ್ಷೇತ್ರಕ್ಕೆ ತುಂಬಲಾರದ ನಷ್ಟ ಉಂಟಾಯಿತು. ಅನಂತರಾಮ ಭಾಗವತರು, ವೇದಾಂತ ಭಾಗವತರೇ ಮುಂತಾದ ಹಲವು ಖ್ಯಾತ ಗಾಯಕ ವಿದ್ವಾಂಸರು ಹರಿಕಥೆ ಮಾಡಲು ತೊಡಗಿದರು. ಅಂತೆಯೇ ಮುತ್ತಯ್ಯ ಭಾಗವತರು ಮಹಾರಾಷ್ಟ್ರದ ಕೃಷ್ಣಭಟ್ ಎಂಬುವರಲ್ಲಿ ಕಥಾ ಕಾಲಕ್ಷೇಪದಲ್ಲಿ ಶಿಕ್ಷಣವನ್ನು ಪಡೆದು ಮಧುರೆಯಲ್ಲಿ ನೆಲೆಸಿದರು. ಸ್ವಲ್ಪ ಕಾಲದಲ್ಲೇ ತಮ್ಮ ಇಂಪಾದ ಕಂಠಶ್ರೀ, ಹಾಸ್ಯಪ್ರವೃತ್ತಿ, ತಮಿಳು ಮತ್ತು ಸಂಸ್ಕೃತದಲ್ಲಿ ಪಾಂಡಿತ್ಯ, ಆಕರ್ಷಕ ವ್ಯಕ್ತಿತ್ವ, ಉತ್ತಮ ಕಥಾನಿರೂಪಣಾಶೈಲಿ ಮುಂತಾದ ಮನಮೆಚ್ಚುವ ಅಂಶಗಳಿಂದ ಕೂಡಿದ ಹರಿಕಥೆ ಮಾಡುವುದರಲ್ಲಿ ಬಹು ಶೀಘ್ರಕಾಲದಲ್ಲೇ ಪ್ರಖ್ಯಾತ ರಾದರು. ವಲ್ಲೀ ಪರಿಣಯಮ್, ಸತಿ ಸುಲೋಚನ ಮತ್ತು ತ್ಯಾಗರಾಜಚರಿತ್ರ ಮುಂತಾದ ಅವರ ಕಥಾಕಾಲಕ್ಷೇಪಗಳು ಬಹಳ ಜನಪ್ರಿಯವಾದುವು.

ಸುಮಾರು ೧೯೦೫ರಲ್ಲಿ ಮುತ್ತಯ್ಯ ಭಾಗವತರು ತಂಜಾವೂರಿಗೆ ಹೋಗಿ ಅವರ ಸೋದರಮಾವ ಹಾಗೂ ಸೇಂಟ್ ಪೀಟರ್ಸ್ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದ ಮಹಾಮಹೋಪಾಧ್ಯಾಯ ಲಕ್ಷ್ಮಣಸೂರಿಯವರೊಡನೆ ಸುಮಾರು ಮೂರು ವರ್ಷ ಗಳ ಕಾಲವಿದ್ದರು. ಈ ಕಾಲದಲ್ಲಿ ತಂಜಾವೂರಿನಲ್ಲಿ ಶ್ರೇಷ್ಠ ಗಾಯಕ ಮತ್ತು ಹರಿಕಥಾ ಭಾಗವತರೆಂದು ಖ್ಯಾತಿ ಪಡೆದರು. ಆಗಿನ ಇವರ ಆತ್ಮೀಯ ಗೆಳೆಯರಲ್ಲಿ ಕೊನೇರಿರಾಜ ಪುರಂ ವೈದ್ಯನಾಥ ಅಯ್ಯರ್, ಮಾಯಾವರಂ ಸುಬ್ಬಯ್ಯರ್, ಮೃದಂಗ ವಿದ್ವಾನ್ ಕುಂಭಕೋಣಂ ಅಳಗನಂಬಿ ಮುಂತಾದವರನ್ನು ಹೆಸರಿಸಬಹುದು.

ತಂಜಾವೂರಿನಲ್ಲಿದ್ದ ಕಾಲದಲ್ಲಿ ಭಾಗವತರು ಸಂಗೀತಶಾಸ್ತ್ರದ ಅಧ್ಯಯನ ಮಾಡಿದರು. ಸಂಗೀತಪ್ರೇಮಿ, ಗ್ರಂಥಕರ್ತ ಮತ್ತು ಶಾಸ್ತ್ರಜ್ಞರಾಗಿದ್ದ ಏಬ್ರಹಾಂ ಪಂಡಿತರ ಸ್ನೇಹ ಉಂಟಾಯಿತು. ಇದಲ್ಲದೆ ಸರಸ್ವತೀ ಮಹಲ್ ಪುಸ್ತಕಭಂಡಾರದಲ್ಲಿ ಸಂಶೋಧನೆ ನಡೆಸಿ ಮೇಳಾಧಿಕಾಲ ಲಕ್ಷಣ ಮುಂತಾದ ಹಲವು ಅಜ್ಞಾತ ಗ್ರಂಥಗಳನ್ನು ಬೆಳಕಿಗೆ ತಂದರು.

ಇದೇ ಕಾಲದಲ್ಲಿ ತಮ್ಮ ಹರಿಕಥಾ ಕಾಲಕ್ಷೇಪಗಳಿಗಾಗಿ ಭಾಗವತರು ಹಲವು ಕೀರ್ತನೆ ಗಳನ್ನು ರಚಿಸತೊಡಗಿದರು. ತಮ್ಮ ಕಥಾಕಾಲಕ್ಷೇಪಗಳಿಗೆ ತಾವೇ ನಿರೂಪಣೆಗಳನ್ನು ಬರೆಯುತ್ತಿದ್ದರು. ಕಲಿಲೋ ಹರಿಸ್ಮರಣಮು (ಕಾಪಿ), ವಲ್ಲೀನಾಯಕ ನೀವೇ ಗತಿ (ಷಣ್ಮುಖಪ್ರಿಯ) ಮುಂತಾದವುಗಳು ಇದೇ ಕಾಲದಲ್ಲಿ ರಚಿಸಲ್ಪಟ್ಟವು. ನಂತರ ಒಂದು ದಶಕದ ಕಾಲದಲ್ಲಿ ಭಾಗವತರು ಒಬ್ಬ ಅತಿ ಶ್ರೇಷ್ಠ ಗಾಯಕರು ಮತ್ತು ಹರಿಕಥಾ ಭಾಗವತರೆಂದು ಪ್ರಸಿದ್ಧರಾದರು. ಆಂಡಿಪಟ್ಟಿ ಜಮೀನ್ದಾರರು, ಎಟ್ಟಿಯಾಪುರದ ರಾಜರು, ರಾಮನಾಡಿನ ರಾಜರೇ ಮುಂತಾದವರು ಇವರ ಪೋಷಕರಾದರು.

ತಮಿಳುನಾಡಿನ ಕರೂರು ಬಳಿಯಿರುವ ಆಂಡಿಪಟ್ಟಿ ಜಮೀನ್ದಾರ್ ಪೆತ್ತಾ ಚೆಟ್ಟಿಯವರ ಆಹ್ವಾನದ ಮೇಲೆ ಕಥಾಕಾಲಕ್ಷೇಪ ಮಾಡಲು ಭಾಗವತರು ಕರೂರಿನಲ್ಲಿ ನೆಲೆಸಿದರು. ಇಲ್ಲಿ ಐದು ವರ್ಷಗಳ ಸ್ಕಂದಷಷ್ಠಿ ಉತ್ಸವವನ್ನು ಆಚರಿಸಿ ನಾಡಿನ ಹಿರಿಯ ಸಂಗೀತ ವಿದ್ವಾಂಸರ ಕಚೇರಿಗಳನ್ನು ಏರ್ಪಡಿಸಿದರು. ಚೆಟ್ಟಿಯವರ ಮರಣದ ನಂತರ ರೆಂಗೂನ್,

ಕಲ್ಕತ್ತ ನಗರಗಳಲ್ಲಿ ಹಲವು ತಿಂಗಳುಗಳ ಕಾಲ ಇದ್ದು ಕಥಾಕಾಲಕ್ಷೇಪ ಮಾಡಿ ಕೀರ್ತಿಶಾಲಿಯಾಗಿ ಮೈಸೂರಿಗೆ ಬಂದು ನೆಲೆಸಿದರು.

೧೯೨೭ರಲ್ಲಿ ನಡೆದ ಒಂದು ಘಟನೆಯು ಭಾಗವತರ ಭವಿಷ್ಯದ ಮೇಲೆ ಅಪಾರ ಪ್ರಭಾವ ಬೀರಿತು. ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರಿನ ಮಹಾರಾಜರಾಗಿದ್ದ ಕಾಲ. ಭಾಗವತರು ದಸರಾ ಉತ್ಸವಕ್ಕಾಗಿ ಮೈಸೂರಿಗೆ ಬಂದರು. ಭೌಳಿ ರಾಗದಲ್ಲಿ ತಪ್ಪುಲನ್ನಿಯು ಎಂಬ ಕೃತಿಯನ್ನು ಚಾಮುಂಡೇಶ್ವರಿಯ ಮುಂದೆ ಹಾಡುತ್ತಿದ್ದಾಗ ನಾಲ್ವಡಿಯವರು ಕೇಳಿ, ಸಂತೋಷಗೊಂಡು ಇವರನ್ನು ತಮ್ಮ ಆಸ್ಥಾನ ವಿದ್ವಾಂಸರಾಗಿ ನೇಮಿಸಿದರು. ಇದರ ಸವಿನೆನಪಿಗಾಗಿ ಇವರು ಮಹಾರಾಜರನ್ನು ಕುರಿತು ತೋಡಿ ರಾಗದಲ್ಲಿ ಅಟ್ಟತಾಳವರ್ಣ ಒಂದನ್ನು ರಚಿಸಿದರು. ೧೯೨೮ರಲ್ಲಿ ಇವರ ಸಂಗೀತವನ್ನು ಮೆಚ್ಚಿಕೊಂಡ ಮಹಾರಾಜರು ಇವರಿಗೆ 'ಗಾಯಕ ಶಿಖಾಮಣಿ' ಎಂಬ ಬಿರುದು ಮತ್ತು ಖಿಲ್ಲತ್ತುಗಳನ್ನಿತ್ತು ಸನ್ಮಾನಿಸಿದರು.

ತಮ್ಮ ಏಕಮಾತ್ರ ಪುತ್ರಿಯು ಕಾಲವಶರಾದುದರಿಂದ ತೀವ್ರ ದುಃಖಿಗೊಂಡು ಮಾನಸಿಕ ಶಾಂತಿಗಾಗಿ ವಾರಾಣಸಿಗೆ ಹೋಗಿ ಅಲ್ಲಿ ಮೈಸೂರು ಭವನದಲ್ಲಿ ೬–೭ ತಿಂಗಳುಗಳ ಕಾಲ ಇದ್ದರು. ಈ ಕಾಲದಲ್ಲಿ ಶುದ್ಧವಾದ ಹಿಂದೂಸ್ತಾನಿ ಸಂಗೀತವನ್ನು ಕೇಳಿ ಪ್ರಭಾವಿತರಾದರು. ಇದೇ ಕಾಲದಲ್ಲಿ ಈಗ ಒಂದು ಜನಪ್ರಿಯ ರಾಗವಾಗಿರುವ ಹಂಸಾನಂದಿ ರಾಗವನ್ನು ರೂಪಿಸಿದರು.

ಭಾಗವತರು ಪ್ರತಿ ಶುಕ್ರವಾರ ಚಾಮುಂಡೇಶ್ವರಿ ಅಮ್ಮನವರ ಸನ್ನಿಧಿಗೆ ಹೋಗಿ ಅರ್ಚನೆ ಮಾಡುತ್ತಿದ್ದರು. ಮಹಾರಾಜರ ಅಭಿಲಾಷೆಯಂತೆ ಶ್ರೀ ಚಾಮುಂಡೇಶ್ವರಿಯನ್ನು ಕುರಿತು ಹಲವು ಅಪರೂಪ ರಾಗಗಳಲ್ಲಿ ೧೧೮ ಕೃತಿಗಳನ್ನು ರಚಿಸಿದರು. ಈ ಕನ್ನಡ ಕೃತಿಗಳ ಸಾಹಿತ್ಯವನ್ನು ವಿದ್ವಾನ್ ದೇವೋತ್ತಮ ಜೋಯಿಸರು ಒದಗಿಸಿದರು. ಶ್ರೀ ಚಾಮುಂಡೇಶ್ವರೀ ಅಷ್ಟೋತ್ತರವು ಯಾವ ಯಾವ ನಾಮಗಳಿಂದ ಪ್ರಾರಂಭವಾಗುವುವೋ ಅವೇ ನಾಮಗಳನ್ನು ಕೃತಿಗಳ ಸಾಹಿತ್ಯದ ಪ್ರಾರಂಭದ ಪದಗಳನ್ನಾಗಿ ಉಪಯೋಗಿಸಿ ಶ್ರೀ ಚಾಮುಂಡಾಂಬಾ ಅಷ್ಟೋತ್ತರ ಕೃತಿಗಳೆಂಬ ೧೦೮ ಕೃತಿಗಳನ್ನು ಬೇರೆ ಬೇರೆ ರಾಗಗಳಲ್ಲಿ ರಚಿಸಿದರು. ಇದಕ್ಕೆ ಪೂರ್ವಭಾವಿಯಾಗಿ ಗಣೇಶ, ಆಂಜನೇಯ, ಮಹಾಬಲೇಶ್ವರ ಮುಂತಾದ ದೇವರನ್ನು ಸ್ತುತಿಸಿ ಕೃತಿಗಳನ್ನೂ, ಕಡೆಯಲ್ಲಿ ಮಂಗಳ ಕೃತಿಯನ್ನೂ ರಚಿಸಿದರು. ಇವಲ್ಲದೆ ನಂಜನಗೂಡು ಶ್ರೀಕಂಠೇಶ್ವರಸ್ವಾಮಿಯನ್ನು ಕುರಿತು ೧೦೮ ಶಿವಾಷ್ಟೋತ್ತರ ಕೃತಿಗಳನ್ನು ರಚಿಸಿ, ಹಾಡಿ, ಮಂಗಳ ಮಾಡಿದರು. ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರು ರಚಿಸಿದ ನವಾವರಣ ರಾಗಮಾಲಿಕೆ ಮತ್ತು ನವಗ್ರಹ ಕೀರ್ತನೆಗಳ ಸಾಹಿತ್ಯಕ್ಕೆ ಸಂಗೀತವನ್ನು ಅಳವಡಿಸಿದರು. ಅದೇ ವರ್ಷ ಮೈಸೂರು ನಗರದಲ್ಲಿ ಇವರಿಗೆ ಬಿನ್ನವತ್ತಳೆಯನ್ನು ಅರ್ಪಿಸಿ ಗೌರವಿಸಲಾಯಿತು.

ಭಾಗವತರು ಸಂಗೀತಶಾಸ್ತ್ರದಲ್ಲಿ ಪಂಡಿತರಾಗಿದ್ದು ಪ್ರತಿವರ್ಷವೂ ಏಬ್ರಹಾಂ ಪಂಡಿತರು ತಂಜಾವೂರಿನಲ್ಲಿ ನಡೆಸುತ್ತಿದ್ದ ಸಂಗೀತ ಸಮ್ಮೇಳನದಲ್ಲಿ ಪ್ರಮುಖ ಪಾತ್ರ

ವಹಿಸುತ್ತಿದ್ದರು. ಮದ್ರಾಸಿನ ಮ್ಯೂಸಿಕ್ ಅಕಾಡೆಮಿಯ ಸ್ಥಾಪಕರಲ್ಲಿ ಇವರು ಒಬ್ಬ ರಾಗಿದ್ದು ಅದರ ಪ್ರತಿ ವರ್ಷದ ಸಮ್ಮೇಳನದಲ್ಲಿ ತಮ್ಮ ಪಾಂಡಿತ್ಯಪೂರ್ಣವಾದ ಶಾಸ್ತ್ರ ಮತ್ತು ಪ್ರಯೋಗಗಳನ್ನು ಕುರಿತ ನಿರೂಪಣೆಗಳಿಂದ ಅಕಾಡೆಮಿಯ ಕೀರ್ತಿ ಮತ್ತು ಪ್ರತಿಷ್ಠೆಗಳು ಹೆಚ್ಚಲು ಕಾರಣರಾದರು. ೧೯೩೦ರಲ್ಲಿ ಅಕಾಡೆಮಿಯ ಸಮ್ಮೇಳನಾಧ್ಯಕ್ಷ ರಾಗಿ 'ಸಂಗೀತ ಕಲಾನಿಧಿ' ಎಂಬ ಬಿರುದನ್ನು ಪಡೆದರು.

೧೯೩೭ರಲ್ಲಿ ವೈಣಿಕ ವಿದುಷಿಯಾಗಿದ್ದ ಮಹಾರಾಣಿ ಸೇತುಪಾರ್ವತೀಬಾಯಿಯವರ ಆಹ್ವಾನದ ಮೇಲೆ ಭಾಗವತರು ತಿರುವಾಂಕೂರಿಗೆ ಹೋದರು. ಅಲ್ಲಿದ್ದ ಕಾಲದಲ್ಲಿ ಸ್ವಾತಿ ತಿರುನಾಳ್ ಮಹಾರಾಜರ ಕೃತಿಗಳಿಗೆ ಸ್ವರಪ್ರಸ್ತಾರವನ್ನು ಸಂಯೋಜಿಸಿ ಅವುಗಳು ಪ್ರಸಿದ್ಧಿಗೆ ಬರಲು ಬಹುಮಟ್ಟಿಗೆ ಕಾರಣರಾದರು. ೧೯೩೮ರಲ್ಲಿ ಅಲ್ಲಿಯ ಸ್ವಾತಿ ತಿರುನಾಳ್ ಮಹಾರಾಜ ಸಂಗೀತ ಕಾಲೇಜಿನ ಪ್ರಥಮಾಚಾರ್ಯರಾಗಿ, ೧೯೪೩ರವರೆಗೆ ಸೇವೆ ಸಲ್ಲಿಸಿ ಸಂಗೀತಶಾಸ್ತ್ರವನ್ನು ಕುರಿತು 'ಸಂಗೀತ ಕಲ್ಪದ್ರುಮಂ' ಎಂಬ ಮಹಾ ಪ್ರಬಂಧವನ್ನು ಬರೆದರು. ಇದಕ್ಕಾಗಿ ತಿರುವಾಂಕೂರು ವಿಶ್ವವಿದ್ಯಾನಿಲಯವು ಇವರಿಗೆ ಡಿ.ಲಿಟ್. ಪದವಿಯನ್ನು ನೀಡಿತು ; ಮತ್ತು ಸರ್ಕಾರವು ಆಜೀವಪರ್ಯಂತ ವಿಶ್ರಾಂತಿ ವೇತನವನ್ನು ನೀಡಿತು. ನಂತರ ಭಾಗವತರು ಮೈಸೂರಿಗೆ ಹಿಂತಿರುಗಿ ಬಂದು ನೆಲೆಸಿದರು. ೧೯೪೫ರ ಜೂನ್ ೩೦ರಂದು ಕಾಲವಶರಾದರು.

ಮುತ್ತಯ್ಯ ಭಾಗವತರು ತಮ್ಮ ಏಕೈಕ ಪುತ್ರಿಯನ್ನು ಕಳೆದುಕೊಂಡಮೇಲೆ, ೧೯೩೯ರಲ್ಲಿ ಸೋದರ ಹರಿಹರ ಭಾಗವತರ ಪುತ್ರ ವೈದ್ಯಲಿಂಗಂ ಅವರನ್ನು ದತ್ತು ತೆಗೆದುಕೊಂಡರು. ಇವರು ಆಂಧ್ರದ ಚಿತ್ತೂರಿನಲ್ಲಿ ನೆಲೆಸಿದ್ದಾರೆ. ನೆಲ್ಲೈ ಕೃಷ್ಣಮೂರ್ತಿ ಎಂಬುವರು ಅವರ ಸಮೀಪ ಬಂಧು ಮತ್ತು ಭಾಗವತರಲ್ಲಿ ಸಂಗೀತ ಶಿಕ್ಷಣವನ್ನು ಪಡೆದವರು. ಎ. ನಾರಾಯಣ ಅಯ್ಯರ್ ಸಹ ಇವರ ಬಂಧು ಮತ್ತುಶಿಷ್ಯರು. ಮೈಸೂರಿನ ಬೆಳಕವಾಡಿ ವರದರಾಜ ಅಯ್ಯಂಗಾರ್ಯರೂ ಇವರ ಶಿಷ್ಯರು. ಭಾಗವತರ ಹಲವು ಶಿಷ್ಯರು ಸಂಗೀತ ಕ್ಷೇತ್ರದಲ್ಲಿ ಪ್ರಖ್ಯಾತರು. ಮಧುರೈ ಮಣಿ ಅಯ್ಯರ್ ಮತ್ತು ಬೂದಲೂರು ಕೃಷ್ಣಮೂರ್ತಿಶಾಸ್ತ್ರಿಗಳು ಇಂಥವರಲ್ಲಿ ಪ್ರಮುಖರು. ಸುಪ್ರೀಂ ಕೋರ್ಟಿನ ನ್ಯಾಯಾಧೀಶ ರಾಗಿದ್ದ ಟಿ. ಎಲ್. ವೆಂಕಟರಾಮ ಅಯ್ಯರ್ ಇವರ ಶಿಷ್ಯರಾಗಿದ್ದರು.

ಮುತ್ತಯ್ಯ ಭಾಗವತರು ರಚಿಸಿದ ಕೃತಿಗಳು ವೈವಿಧ್ಯತೆ, ಗುಣ ಮತ್ತು ರಾಗ ಭಾವ ಗಳಿಗೆ ಹೆಸರಾಗಿವೆ. ಅವರು ಆದಿತಾಳದಲ್ಲಿ ಐದು ತಾನವರ್ಣಗಳನ್ನೂ, ಅಟ್ಟತಾಳದಲ್ಲಿ ಐದು ತಾನವರ್ಣಗಳನ್ನೂರಚಿಸಿದ್ದಾರೆ. ಇವಲ್ಲದೆ ಒಂದು ಪದವರ್ಣವನ್ನೂ ರಚಿಸಿದ್ದಾರೆ. ಅದು ಆನಂದಭೈರವಿ ರಾಗದಲ್ಲಿ ಪಂಕಜ ಲೋಚನಿರಾ ಎಂಬುದು. ನಾಲ್ಕು ದರುಗಳು, ಹತ್ತು ತಿಲ್ಲಾನಗಳು ಮತ್ತು ಐದು ರಾಗಮಾಲಿಕೆಗಳನ್ನು ರಚಿಸಿದ್ದಾರೆ. ಅವರ ಸುಮಾರು ೪೦೦ ಕೃತಿಗಳು ಹಿಂದೂ ಧರ್ಮದ ಬೇರೆಬೇರೆ ದೇವತೆಗಳನ್ನು ಕುರಿತ ರಚನೆಗಳು. ಇವು ಗಳಲ್ಲಿ ಹಲವು ಜನಪ್ರಿಯ ರಾಗಗಳಲ್ಲಿವೆ ; ಕೆಲವು ಅಪರೂಪವಾದ ರಾಗಗಳಲ್ಲಿವೆ. ಶುದ್ಧ ಸೀಮಂತಿನಿ, ನವರಸ ಕನ್ನಡ, ಸರಸ್ವತಿ ಮುಂತಾದ ರಾಗಗಳ ಸ್ವರೂಪಗಳು ತ್ಯಾಗರಾಜ

ಸ್ವಾಮಿಯ ಕೃತಿಗಳಲ್ಲಿ, ಮತ್ತು ಪಾಡಿ, ಮಾಧವ ಮನೋಹರಿ, ದ್ವಿಜಾವಂತಿ, ಅಮೃತ ವರ್ಷಿಣಿ ಮುಂತಾದ ರಾಗಗಳ ಸ್ವರೂಪವು ದೀಕ್ಷಿತರ ಕೃತಿಗಳಲ್ಲಿ ರೂಪಿಸಲ್ಪಟ್ಟಿವೆ. ಹಲವು ರಾಗಗಳ ಲಕ್ಷಣಗಳು ಗ್ರಂಥಗಳಲ್ಲಿ ಹೇಳಿವೆಯೇ ವಿನಾ ಅವುಗಳ ಲಕ್ಷ್ಯವು ದೊರಕುವುದಿಲ್ಲ.

ಮುತ್ತಯ್ಯ ಭಾಗವತರು ಇಂತಹ ರಾಗಗಳ ಸ್ವರಗಳಿಗೆ ಜೀವ ತುಂಬಿ ಅವುಗಳ ಜೀವಂತಚಿತ್ರವನ್ನು ನಮಗೆ ಕೊಟ್ಟಿದ್ದಾರೆ. ನೀದುಮಹಿಮ (ಹಂಸಾನಂದಿ) ಸಚಾಮರ ರಮಾವಾಣಿ ಮುಂತಾದ ಕೃತಿಗಳು ಇದಕ್ಕೆ ನಿದರ್ಶನ. ಮೋಹನ ತರಂಗಿಣೀ ರಾಗವು ಅವರ ಭುವನೇಶ್ವರಿಯ ಮತ್ತು ಸಿದ್ಧಿವಿನಾಯಕಂ ಮುಂತಾದ ಕೃತಿಗಳಿಂದ ಜನಪ್ರಿಯ ವಾಗಿದೆ. ಅಂತೆಯೇ ಸಾರಸಮುಖಿ ಎಂಬ ಕೃತಿಯಿಂದ ಗೌಡಮಲ್ಹಾರ್, ಜಾಲಂಧರ ಎಂಬ ಕೃತಿಯಿಂದ ವಲಚಿರಾಗವು ಪ್ರಸಿದ್ಧವಾಗಿವೆ. ಹಲವು ನೂತನ ರಾಗಗಳನ್ನು ಕಲ್ಪಿಸಿ ಅವುಗಳಿಗೆ ಲಕ್ಷ್ಯವನ್ನು ರಚಿಸಿರುವುದು ಭಾಗವತರು ಕರ್ನಾಟಕ ಸಂಗೀತಕ್ಕೆ ನೀಡಿರುವ ಪ್ರಮುಖ ಕೊಡುಗೆ ಎನ್ನಬಹುದು. ಅವರು ಸ್ವರಮೇಳ ಮತ್ತು ರಾಗವಿನ್ಯಾಸ—ಇವೆರಡನ್ನೂ ಒಳಗೊಂಡ ಸ್ವರಸರಣಿಯನ್ನು ಕಲ್ಪಿಸಿದ್ದಾರೆ. ಸ್ವರಸರಣಿಯಲ್ಲಿ ರಾಗದ ವಿಶಿಷ್ಟವಾದ ಸ್ವರೂಪವನ್ನು ಕಾಣುವುದರಲ್ಲಿ ಅವರು ಪ್ರತಿಭಾಶಾಲಿಯಾಗಿದ್ದರು. ಅವರು ರೂಪಿಸಿದ ನೂತನ ರಾಗಗಳಲ್ಲಿ ರಚಿಸಿರುವ ಸುಂದರವಾದ ಕೃತಿಗಳೆಂದರೆ ವಿಜಯನಾಗರಿ ರಾಗದ 'ವಿಜಯಾಂಬಿಕೆ', ಪಶುಪತಿಪ್ರಿಯ ರಾಗದಲ್ಲಿನ 'ಶರವಣಭವ', ಬುಧಮನೋಹರಿ ರಾಗದ 'ಸಮಯಮಿದೇ' ಮುಂತಾದವು. ಭಾಗವತರು ನಿರೋಷ್ಟ ಮುಂತಾದ ೨೦ ನೂತನ ರಾಗಗಳನ್ನು ಕಲ್ಪಿಸಿ ಅವುಗಳಲ್ಲಿ ಕೃತಿಗಳನ್ನು ರಚಿಸಿದರು. ಇವರ ಕೃತಿಗಳು ಸಂಸ್ಕೃತ, ತೆಲುಗು, ತಮಿಳು ಮತ್ತು ಕನ್ನಡ ಭಾಷೆಗಳಲ್ಲಿದ್ದು ಹರಿಕೇಶ ಅಥವಾ ಹರಿಕೇಶಪುರ ಎಂಬ ಅಂಕಿತವನ್ನು ಹೊಂದಿವೆ. ಇವರ ಕೃತಿಗಳ ಸಾಹಿತ್ಯವನ್ನು ನೋಡಿದರೆ ಅದು ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಮತ್ತು ರಾಮನಾಥಪುರಂ ಶ್ರೀನಿವಾಸ ಅಯ್ಯಂಗಾರ್ ಮುಂತಾದ ವಾಗ್ಗೇಯಕಾರರ ರಚನೆಗಳ ಮಾದರಿಯನ್ನು ಹೋಲುತ್ತದೆ; ಸಾಹಿತ್ಯಭಾಗದ ಸೌಂದರ್ಯಕ್ಕಿಂತಲೂ ಅವುಗಳ ಸಂಗೀತದ ಗುಣಮಟ್ಟಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಕಂಡುಬರುತ್ತದೆ.

ಮುತ್ತಯ್ಯ ಭಾಗವತರು ತ್ಯಾಗರಾಜಸ್ವಾಮಿಯ ಪರಮಭಕ್ತರಾಗಿದ್ದು ಅವರನ್ನು ಪೂಜಿಸುತ್ತಿದ್ದರು ಮತ್ತು ಶೈಲಿಯಲ್ಲಿ ಅವರನ್ನೇ ಅನುಸರಿಸಿದರು. ಹಲವು ಸಂಗತಿಗಳ ಪ್ರಯೋಗದಿಂದ ತಮ್ಮ ಕೃತಿಗಳನ್ನು ವಿಸ್ತಾರವಾಗಿ ನಿರೂಪಿಸುವುದರ ಮೂಲಕ ರಾಗಗಳ ಸಂಪೂರ್ಣ ಚಿತ್ರಣವನ್ನು ನಮ್ಮ ಮುಂದಿಟ್ಟಿದ್ದಾರೆ. ಭೈರವಿ ರಾಗದ 'ನೀ ಪಾದಮೇ ಗತಿ', ತೋಡಿ ರಾಗದ 'ಬಿಹಲದೇವಿ', ಶಂಕರಾಭರಣ ರಾಗದ 'ಸಹಜ ಗುಣ', ಖರಹರಪ್ರಿಯ ರಾಗದ 'ಶ್ರೀಕೃತಿ' ಎಂಬ ಕೃತಿಗಳು ಇದಕ್ಕೆ ನಿದರ್ಶನ. ಅವರಿಗೆ ಮಧ್ಯಮ ಕಾಲವು ಹೆಚ್ಚು ಪ್ರಿಯವಾಗಿತ್ತು. ಅವರು 'ಶ್ರೀಮತ್ತ್ಯಾಗರಾಜ ವಿಜಯಂ' ಎಂಬ ಏಳು ಅಧ್ಯಾಯ ಗಳುಳ್ಳ ಸಂಸ್ಕೃತ ಕಾವ್ಯಗ್ರಂಥವನ್ನು ರಚಿಸಿದ್ದಾರೆ.

ಭಾಗವತರು ಗೋಟುವಾದ್ಯ (ಚಿತ್ರವೀಣಾ) ಮತ್ತು ಮೃದಂಗವನ್ನು ನುಡಿಸುವುದರಲ್ಲಿ ಪ್ರವೀಣರಾಗಿದ್ದರು. ತಂಜಾವೂರು ನಾರಾಯಣಸ್ವಾಮಪ್ಪನವರಲ್ಲಿ ಮೃದಂಗ ವಾದ್ಯ ನುಡಿಸುವುದರಲ್ಲಿ ಶಿಕ್ಷಣ ಪಡೆದಿದ್ದರು. ಗೋಟುವಾದ್ಯಂ ನಾರಾಯಣ ಅಯ್ಯಂಗಾರ್ಯರನ್ನು ಮೈಸೂರಿಗೆ ಕರೆತಂದು ಪರಿಚಯ ಮಾಡಿಸಿದವರು ಇವರೇ. 'ತ್ಯಾಗರಾಜ ಸಂಗೀತ ವಿದ್ವತ್ಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಇವರು ಮೈಸೂರಿನಲ್ಲಿ ವಾಸವಾಗಿದ್ದ ಮನೆಯು ಕಲಾದೇಗುಲವಾಗಿತ್ತು.

ಭಾಗವತರು ಎತ್ತರವಾದ ವ್ಯಕ್ತಿ. ತುಂಬಿದ ಆಕರ್ಷಕವಾದ ಮೈಕಟ್ಟು. ವರ್ಚಸ್ಸಿನಿಂದ ಕೂಡಿದ ಮುಖ. ತಮ್ಮ ವಿಶಾಲವಾದ ಹಣೆಯಲ್ಲಿ ಸುಗಂಧಪೂರಿತವಾದ ಪಳನಿ ವಿಭೂತಿಯನ್ನೂ, ಹಣೆಯ ಮಧ್ಯೆ ಪುನುಗು, ಜವ್ವಾಜಿ ಮತ್ತು ಅರಗಜ ಮಿಶ್ರಿತವಾದ ಕಪ್ಪು ಬೊಟ್ಟನ್ನು ಧರಿಸುತ್ತಿದ್ದರು. ಕಿವಿಗಳಿಗೆ ಹೊಳೆಯುವ ವಜ್ರದ ಕಡಕಗಳು, ಕೊರಳಲ್ಲಿ ಚಿನ್ನದ ಸರದಿಂದ ಕೂಡಿದ ರುದ್ರಾಕ್ಷಿ ಮತ್ತು ಚಿನ್ನದ ಸರಗಳು, ಉಡಲು ಮತ್ತು ಹೊದ್ದುಕೊಳ್ಳಲು ಅಗಲವಾದ ಅಂಚಿನ ಪಂಚೆಗಳು, ಕತ್ತಿನಿಂದ ಮುಂಡಿಯವರೆಗೆ ಇಳಿಬಿಡುತ್ತಿದ್ದ ಕಲಾಪತ್ತಿನ ಸಾದರ, ಕೈಯಲ್ಲಿ ಧರಿಸಿದ ಚಿನ್ನದ ಕಂಕಣ, ಬೆರಳುಗಳಿಗೆ ನವರತ್ನಖಚಿತವಾದ ಉಂಗುರಗಳು—ಇವು ಅವರ ದೇಹಾಲಂಕಾರ ಮತ್ತು ಉಡುಪಿನ ವೈಖರಿಯಾಗಿತ್ತು.

ಭಾಗವತರು ತ್ಯಾಗರಾಜಸ್ವಾಮಿಯ ನಂತರದ ಕಾಲದ ಒಬ್ಬ ಶ್ರೇಷ್ಠ ಗಾಯಕರೂ, ವಾದಕರೂ, ಹರಿಕಥಾಕಾಲಕ್ಷೇಪದಲ್ಲಿ ಪ್ರವೀಣರೂ ಆಗಿದ್ದು ತಮ್ಮ ಸುಂದರವಾದ ರಚನೆಗಳಿಂದ ಕರ್ನಾಟಕ ಸಂಗೀತಕ್ಷೇತ್ರವನ್ನು ಶ್ರೀಮಂತಗೊಳಿಸಿದ ಒಬ್ಬ ವಿಶಿಷ್ಟ ಸೃಜನಶೀಲತೆಯುಳ್ಳ ವಾಗ್ಗೇಯಕಾರರು.

ಶ್ರೀರಸ್ತು

# ॥ ಶ್ರೀ ತ್ಯಾಗರಾಜ ವಿಜಯ ॥

## ಸರ್ಗ ಒಂದು

ಸ್ಯ ಸ್ರಷ್ಟ ಸಂತುಷ್ಟಿಂ ಪಾತ್ರಗಾಯಕ ಸಂಪದಮ್ ।
ಸ್ಯಾಧೀ ಚ ಸಂಹರ್ತಾ ನಾದಬ್ರಹ್ಮ ಗತಿರ್ಮಮ ॥ ೧ ॥

:ನಾದಃ ಸರ್ವಭೂತಾನಾಂ ಸರ್ವವರ್ಣಸ್ಯಚಾಂಕುರಃ ।
: ಬೀಜಂ ಮಂತ್ರಕೋಟೀನಾಂ ತಂ ನಾದಂ ಪ್ರಣಮಾಮ್ಯಹಮ್ ॥ ೨ ॥

ಂಚರೆ ಜಗತ್ತಿನ ಸೃಷ್ಟಿಕರ್ತನಾಗಿರುವ, ಸಕಲರಿಗೂ ಸಂತುಷ್ಟಿ ನೀಡುವ, ದವನ್ನು ರಕ್ಷಿಸುವ, ಮಾನಸಿಕ ವ್ಯಥೆ ಹಾಗೂ ಶಾರೀರಕ ರೋಗಗಳನ್ನು ಾದಬ್ರಹ್ಮನೇ ನನಗೆ ಗತಿ.

ೂತಗಳಿಗೂ ಮತ್ತು ವರ್ಣಗಳಿಗೂ ಯಾವ ನಾದವು ಅಂಕುರವೋ, ಮಂತ್ರ ಯಾವ ನಾದವು ಬೀಜಪ್ರಾಯವೋ, ಆ ನಾದವನ್ನು ನಮಿಸುವೆನು.

ಓತ್ಪತ್ತಿ ಕರಂ ದೇವಂ ನಮಾಮಿ ಪ್ರಣವಾಕೃತಿಮ್ ।
ಲಾಧಾರಸ್ಥಿತಂ ಜ್ಞಾನಮೋಕ್ಷಸಿದ್ಧಿಪ್ರದಂ ಗಜಮ್ ॥ ೩ ॥

ಧಾರದಲ್ಲಿರುವ, ಜ್ಞಾನ ಹಾಗೂ ಮೋಕ್ಷಸಿದ್ಧಿಯ ಮೂಲವಾದ ಓಂಕಾರ ಉತ್ಪತ್ತಿ ಮಾಡುವ, ಓಂಕಾರ ರೂಪಿಯಾದ ಗಜಾನನ ದೇವನನ್ನು ನೆ.

ವಿದ್ಯಾಪ್ರವೀಣಾಂ ತಾಂ ರಾಗಭಾವಲಯಾತ್ಮಿಕಾಮ್ ।
ಲೀಂ ವಾಗೀಶ್ವರೀಂ ವಂದೇ ವೀಣಾವಾದನತತ್ಪರಾಮ್ ॥ ೪ ॥

ನಾವ, ಲಯಾತ್ಮಕಳೂ, ನಾದವಿದ್ಯಾ ಪ್ರವೀಣಳೂ, ವೀಣಾವಾದನ ತತ್ಪರಳೂ ಶ್ವರೀ ದೇವಿಯನ್ನು ನಮಸ್ಕರಿಸುವೆನು.

ಜ್ಞಾನತಿಮಿರಘ್ನಂ ತಮಾನಂದಾಂಬುಧಿವಾಸಿನಮ್ ।
ಜ್ಞಾನತತ್ಪರಂ ವಂದೇಮಜ್ಞಾನ ನಯನಾಂಜನಮ್ ॥ ೫ ॥

ನವೆಂಬ ಅಂಧಕಾರವನ್ನು ಹೋಗಲಾಡಿಸಿದ, ಆನಂದಸಾಗರದಲ್ಲಿ ವಾಸಿಸುವ ನದ ಕಣ್ಣುಗಳನ್ನು ತೆರೆಸಿದ, ಸುಜ್ಞಾನತತ್ಪರರಾದ ನನ್ನ ಆಚಾರ್ಯರನ್ನು ನು.

ಆದಿಸ್ವರೇಸ್ವಬೀಜಂ ತಮಂತ್ಯಸ್ವರೆ ಸುಸೇವಿತಮ್ ।
ಆದ್ಯಂತರಹಿತಂ ವಂದೇಹ್ಯಂಬಿಕಾತನಯಂ ಗುಹಮ್ ॥ ೬ ॥

ಆದಿಸ್ವರವಾದ ಷಡ್ಜದಂತಿರುವ, ಅಂತ್ಯಸ್ವರವಾದ ನಿಷಾದದಿಂದ ಚೆನ್ನಾಗಿ ಸೇವಿಸಲ್ಪಟ್ಟ, ಅಂಬಿಕಾತನಯನೂ, ಆದಿ ಅಂತ್ಯವಿಲ್ಲದವನೂ ಆದ ಸುಬ್ರಹ್ಮಣ್ಯನನ್ನು ನಮಸ್ಕರಿಸುವೆನು.

ರಾಮೇ ಧರ್ಮಂ ಜನೇಷ್ವರ್ಥಂ ಕಾಮಂ ಚ ಶ್ರೀಪತಿಸ್ತುತೌ ।
ಯಸ್ತ್ಯಕ್ತ್ವಾ ಮುಕ್ತ ಆಭಾತಿ ತ್ಯಾಗರಾಜಂ ತಮಾಶ್ರಯೇ ॥ ೭ ॥

ರಾಮನಲ್ಲಿ ಧರ್ಮ ಹೇಗಿದೆಯೋ, ಜನರಲ್ಲಿ ಅರ್ಥ ಕಾಮಗಳು ಹೇಗಿವೆಯೋ ಹಾಗೆ ಶ್ರೀಪತಿಯನ್ನು ಸ್ತುತಿಸುತ್ತ ಎಲ್ಲವನ್ನೂ ತ್ಯಜಿಸಿ ಮುಕ್ತರಾಗಿರುವ ತ್ಯಾಗರಾಜ ಎಂಬ ಅನ್ವರ್ಥನಾಮವನ್ನು ಹೊಂದಿರುವ ತ್ಯಾಗರಾಜರನ್ನು ಆಶ್ರಯಿಸುವೆನು.

ತದುತ್ಕರ್ಷಂ ಪುಮಾನ್ ಕೋಽತ್ರ ಸುಷ್ಠು ವರ್ಣಯಿತುಂ ಕ್ಷಮಃ ।
ಯಸ್ಯ ಪ್ರತ್ಯಕ್ಷಮಿತ್ರಾಣಿ ರಾಮ ಮಾರುತಿ ನಾರದಾಃ ॥ ೮ ॥

ಯಾರಿಗೆ ಶ್ರೀರಾಮ, ಮಾರುತಿ, ನಾರದರು ಪ್ರತ್ಯಕ್ಷ ಮಿತ್ರರಾಗಿರುವರೋ, ಅಂತಹ ಮಹಿಮಾನ್ವಿತರ ಅತಿಶಯವಾದ ಗುಣಗಳನ್ನು ವರ್ಣಿಸಲು ಯಾವ ಮನುಜನು ತಾನೇ ಸಮರ್ಥ !

ಅಜ್ಞಾನರವಯೇ ಪಾಪಪವಯೇ ಕವಯೇ ವಯಮ್ ।
ಕಥಂ ಪ್ರತ್ಯುಪಕುರ್ವೋಽಸ್ಮೈ ಯೇನ ಗಾನಕಲೋದ್ಧೃತಾ ॥ ೯ ॥

ಅಜ್ಞಾನವೆಂಬ ಅಹಂಕಾರವನ್ನು ಹೋಗಲಾಡಿಸುವ ಸೂರ್ಯನಂತಿರುವವರಿಗೆ, ನಮ್ಮ ಪಾಪಗಳನ್ನು ಹರಿಸುವ ವಜ್ರಾಯುಧಧಾರಿಯಾದ ದೇವೇಂದ್ರನಂತಿರುವವರಿಗೆ, ನಮಗೆ ಕವಿಯಾಗಿ, ನಮ್ಮ ಗಾನಕಲೆಯನ್ನು ಉದ್ಧರಿಸಿದವರಿಗೆ ನಾನು ಹೇಗೆ ಪ್ರತ್ಯುಪಕಾರ ಮಾಡಲಿ !

ತತ್ಕೃತೀರೂಪಜೀವಾಬ್ಧಿಸ್ತಚ್ಚರಿತ್ರಂ ನ ಚಿಂತ್ಯಯೇ ।
ವಿಮೃಶ್ಯತೇ ಕಿಮಂಭೋದಸ್ವರೂಪಂ ತೋಯಪಾಯಿಭಿಃ ? ॥ ೧೦ ॥

ನೀರನ್ನು ಕುಡಿಯುವ ಜನರು ಮೇಘಗಳ ಬಗ್ಗೆ ಚಿಂತನೆ ಮಾಡುತ್ತಾರೆಯೇ ? ಇದನ್ನು ಜನರು ಹೇಗೆ ಮಾಡುವುದಿಲ್ಲವೋ ಹಾಗೆ ಅವರ (ತ್ಯಾಗರಾಜರ) ಕೃತಿಗಳಿಂದಲೇ ಜೀವನ ನಡೆಸುತ್ತಿರುವವರು ಅವರ ಚರಿತ್ರೆಯನ್ನು ಕುರಿತು ಚಿಂತನೆ ಮಾಡುವುದಿಲ್ಲ.

ಚತುರೋಽಪ್ಯಾಶ್ರಮಾನ್ ಪ್ರಾಪ್ತಶ್ಚತುರೋ ರಾಮಕೀರ್ತನೇ ।
ಚತುರಃ ಪುರುಷಾರ್ಥಾನ್ ಸ ಪ್ರಾಪ್ನುಯಾತ್ ಪುರುಷೋ ಧ್ರುವಂ ॥ ೧೧ ॥

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮಗಳನ್ನು ಹೊಂದಿರುವವನು ಚತುರನು. ಸದಾ ಕಾಲ ರಾಮಕೀರ್ತನೆಯಲ್ಲಿ ತೊಡಗಿರುವವನು ಕುಶಲನು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಪುರುಷಾರ್ಥಗಳನ್ನು ಪಡೆಯುವವನು ಜಾಗರೂಕನು.

ಇತ್ಯತ್ರ ತ್ಯಾಗರಾಜಾಖ್ಯೋ ಗುರುರೇವ ನಿದರ್ಶನಮ್ ।
ಯಚ್ಚರಿತ್ರಮಹಂ ವಕ್ಷ್ಯೇ ರಸನಾರಸಲಾಲಸಃ ॥ ೧೨ ॥

ಗುರುದೇವರಾದ ತ್ಯಾಗರಾಜರು ಇದಕ್ಕೆ ನಿದರ್ಶನ. ಬಾಯಲ್ಲಿ ನೀರೂರಿಸುವ ಅವರ ಚರಿತ್ರೆಯನ್ನು ನಾನು ಹೇಳುವೆನು.

ಮಹಚ್ಚರಿತ್ರ ರತ್ನಾಢ್ಯೇ ಗ್ರಂಥಹಾರೇ ಮಯಾ ಕೃತೇ ।
ಚರಿತ್ರಮಾತ್ರ ಸಾರಜ್ಞಾಃ ಸಂತು ಸಂತೋ ವಿವೇಕಿನಃ ॥ ೧೩ ॥

ನಾನು ರಚಿಸಿರುವ ಮಹಾನ್ ವ್ಯಕ್ತಿಯ ಗ್ರಂಥಹಾರದಲ್ಲಿ ದೋಷಗಳನ್ನು ತ್ಯಜಿಸಿ, ಗುಣಗಳನ್ನು ಮಾತ್ರ ಸತ್ಪುರುಷರು ಗ್ರಹಿಸಲಿ.

ಸಮುದ್ರವಾಸಸೋ ದೇವ್ಯಾ ಭೂಮ್ಯಾಃ ಶೋಭಾಪ್ರದಾಯಕಃ ।
ನದೀಮಾತೃಕ ಭೂಮ್ಯಾಢ್ಯಃ ಸಹ್ಯಜಾಕ್ಷೀರಪಾವನಃ ॥ ೧೪ ॥

ಸಸ್ಯಶಾಲಿಸಂಕೇದಾರಃ ಶರಭೋಜಿ ನೃಪೋದ್ಭವಃ ।
ಕಲಾನಾಂ ಜನ್ಮಭೂಃ ಸರ್ವಸಂಪದಾಂ ಸ್ಥಿರಶೇವಧಿಃ ॥ ೧೫ ॥

ಮಹತಾಮವತಾರಾರ್ಹ ಸೋಪಾನಾಯಿತ ಗೋಪುರಃ ।
ಚೋಳದೇಶೋ ಹಿ ಸಂಪನ್ನೋ ರಾಜತೇ ದಕ್ಷಿಣಾಪಥೇ ॥ ೧೬ ॥

ಸಮುದ್ರವಾಸಿಯಾದ, ಭೂಮಿಗೆ ಶೋಭೆ ತರುವಳಾದ, ಸಹ್ಯಾದ್ರಿಯಲ್ಲಿ ಜನಿಸಿ ಪವಿತ್ರವಾದ ಜಲವನ್ನು ಪಡೆದಿರುವ ನದೀದೇವಿಯಾದ ಕಾವೇರಿಯು ಹರಿಯುವ ನಾಡಾದ, ಒಳ್ಳೆಯ ಫಲವತ್ತಾದ ಭೂಮಿಯಿಂದ ಕೂಡಿ ಸಸ್ಯಸಮೃದ್ಧಿಯುಳ್ಳ, ಶರಭೋಜಿ ಮಹಾರಾಜನಿಂದ ಉದ್ಧಾರವಾದ, ಸಕಲ ಸಂಪತ್ತುಗಳ ಆಗರವಾದ ಈ ನಾಡು (ಚೋಳದೇಶ) ಕಲೆಗಳ ಜನ್ಮಭೂಮಿಯಾಗಿತ್ತು. ಮೆಟ್ಟಿಲುಗಳೋಪಾದಿಯಂತಿರುವ ಗೋಪುರಗಳಿಂದ ಕೂಡಿ, ಸತ್ಪುರುಷರು ಅವತರಿಸಲು ಯೋಗ್ಯವಾದ ಈ ನಾಡು ದಕ್ಷಿಣ ಭಾರತದಲ್ಲಿ ಚೋಳದೇಶವೆಂದು ರಾರಾಜಿಸುತ್ತಿದೆ.

ತತ್ರಾಸ್ತೇ ಪಾವನಂ ಕ್ಷೇತ್ರಂ ತಿರುವಾರೂರಿತಿ ಶ್ರುತಮ್ ।
ಯತ್ರ ಶ್ರೀತ್ಯಾಗರಾಜಾಖ್ಯಃ ಸೋಮಸ್ಕಂದೋ ವಿರಾಜತೇ ॥ ೧೭ ॥

ಇಂತಹ ನಾಡಿನಲ್ಲಿ ತಿರುವಾರೂರು ಎಂಬ ಪವಿತ್ರ ಕ್ಷೇತ್ರವಿದೆ. ಇಂತಹ ಕ್ಷೇತ್ರದಲ್ಲಿ ಉಮಾ, ಸ್ಕಂದ ಸಹಿತನಾದ ಶ್ರೀ ತ್ಯಾಗರಾಜಸ್ವಾಮಿಯು ವಿರಾಜಿಸುತ್ತಿದ್ದಾನೆ.

ತತ್ಕೃಪಾಲೇಶಸಂಭೂತಸ್ತತ್‌ಕ್ಷೇತ್ರೇ ತಸ್ಯ ದೀಪಕಃ ।
ಕಶ್ಚಿದ್ ವಿಪಶ್ಚಿದುತ್ತಂಸಃ ಶುಭ್ರವಾಙ್ಮನಸೋ ಯುವಾ ॥ ೧೮ ॥

ಈ ತ್ಯಾಗರಾಜಸ್ವಾಮಿಯ ಕೃಪೆಯಿಂದ ಆ ಕ್ಷೇತ್ರಕ್ಕೆ ದೀಪದಂತೆ ಇದ್ದ, ಶುದ್ಧವಾದ ಮಾತು ಮತ್ತು ಮನಸ್ಸುಳ್ಳ ಒಬ್ಬ ಯುವ ಬ್ರಾಹ್ಮಣಶ್ರೇಷ್ಠನಿದ್ದನು.

ಸೌಶೀಲ್ಯವರ್ಧಿತ ಶ್ರೇಯಾಃ ಶ್ರೇಯೋಲಬ್ಧಮಹಾಮತಿಃ ।
ಮತಿಪ್ರಣೀತ ಸದ್ಗ್ರಂಥೋ ಗ್ರಂಥತೋಷಿತ ಕೇಶವಃ ॥ ೧೯ ॥

ಸೌಜನ್ಯತೆಯಿಂದ ಹೆಚ್ಚಿನ ಕೀರ್ತಿಯುಳ್ಳ ಆ ಮಹಾಮತಿಯು ಸದ್ಗ್ರಂಥವನ್ನು ರಚಿಸಿ, ನಾರಾಯಣ(ಕೇಶವ)ನನ್ನು ಸಂತೋಷಗೊಳಿಸಿದನು.

ತಂಜಾಪುರನರೇಂದ್ರೇಣ ಮಹಾರಾಷ್ಟ್ರಕುಲೇಂದುನಾ ।
ಷಾಜಿರಾಜೇನ ಭೂಯೋಭಿರ್ಬಹುಮಾನೈಃ ಸಮುದ್ಧೃತಃ ॥ ೨೦ ॥

ರಂಜಕಃ ಸ್ವಕೃತೈರ್ಗೀತೈರ್ನಿಜಕಾಲಿಕ ಗಾಯಕಾನ್ ।
ಭಂಜಕಃ ಸ್ವಶ್ರುತೈಃ ಶಿಷ್ಯೈರಖಿಲಾನಪಿ ನಾಸ್ತಿಕಾನ್ ॥ ೨೧ ॥

ಔದಾರ್ಯಭೂಷಣಃ ಸತ್ಯಭಾಷಣೋ ವೇಷವರ್ಜಿತಃ ।
ದ್ವೇಷಿಣಾಂ ಚ ಹಿತಾನ್ವೇಷೀ ವೈದುಷ್ಯಶ್ರೀಜುಷಾಂ ವರಃ ॥ ೨೨ ॥

ವೇದಾಂತತತ್ತ್ವ ಸಂಸ್ಪರ್ಶಿವಾಗ್ಧಾರಾಭಿಃ ಸತಾಂ ಮನಃ ।
ಆಕರ್ಷನ್ ಕಥಕಶ್ರೇಷ್ಠಸ್ತ್ರೈಲಿಂಗೋ ಬ್ರಾಹ್ಮಣೋಽವಸನ್ ॥ ೨೩ ॥

ಈಶಾವಾಸ್ಯಮನಸ್ಕತ್ವಾದವದಾತ ಸ್ವಭಾವತಃ ।
ಗೈರ್ವಾಣ್ಯಾಂ ಧ್ರೀ ಗಿರೋಶ್ಚಾರುಕವಿತಾಭರಣಾಚ್ಚಸಃ । ॥ ೨೪ ॥

ಗಿರಿರಾಜಕವಿರ್ನಾಮ್ನಾ ಪ್ರಥಿತಃ ಪೃಥುಮಾನಸಃ ।
ಸತ್ಪುತ್ರೈಃ ಪಂಚಭಿಃ ಕಾಲಂ ನಿನಾಯ ನ್ಯಾಯಮಾರ್ಗಗಃ ॥ ೨೫ ॥

ಈತನು ಮಹಾರಾಷ್ಟ್ರ ಕುಲದೀಪಕನಾದ, ತಂಜಾವೂರಿನ ರಾಜ ಷಾಹಜಿಯಿಂದ ಬಹಳ ಬಹುಮಾನಗಳನ್ನು ಪಡೆದು ಗೌರವಕ್ಕೆ ಪಾತ್ರನಾಗಿದ್ದನು ; ತನ್ನ ಸಮಕಾಲೀನ ಗಾಯಕರೇ ಮುಂತಾದವರನ್ನು ಸಂತೋಷಪಡಿಸಿದ್ದನು ; ನಾಸ್ತಿಕರಾದ ಎಲ್ಲ ಶಿಷ್ಯವೃಂದದವರನ್ನು ನಿವಾರಿಸಿದ್ದನು ; ಉದಾರಿಯೂ, ಸತ್ಯವನ್ನಾಡುವವನೂ, ಬೂಟಾಟಿಕೆ ಇಲ್ಲದವನೂ, ಶತ್ರುಗಳಿಗೂ ಸಹ ಹಿತವನ್ನುಂಟು ಮಾಡುವವನೂ, ಪಂಡಿತರನ್ನು ಗೌರವಿಸುವುದರಲ್ಲಿ ಅಗ್ರಗಣ್ಯನೂ ಆಗಿದ್ದನು ; ತನ್ನ ವಾಗ್ಧಾರೆಯಿಂದ ವೇದಾಂತತತ್ವಗಳನ್ನು ನಿರೂಪಿಸಿ ಆಕರ್ಷಿಸುವ ಅತ್ಯಂತ ಶ್ರೇಷ್ಠನಾದ, ಕಥಕನಾದ ತ್ರೈಲಿಂಗ ಬ್ರಾಹ್ಮಣನಾಗಿದ್ದನು. ಈತನು ಸ್ವಭಾವದಿಂದಲೇ ಭಗವಂತನ ವಾಸಕ್ಕೆ ಯೋಗ್ಯವಾದ ಮನಸ್ಸನ್ನು ಹೊಂದಿದ್ದು,

ಸಂಸ್ಕೃತ ಮತ್ತು ಆಂಧ್ರ ಭಾಷೆಗಳಲ್ಲಿ ಪಾಂಡಿತ್ಯ ಪಡೆದು, ಸುಂದರವಾದ ಕವಿತೆಗಳನ್ನು ರಚಿಸುತ್ತಿದ್ದುದರಿಂದ, 'ಗಿರಿರಾಜ ಕವಿ' ಎಂಬ ಅನ್ವರ್ಥವಾದ ಬಿರುದನ್ನು ಪಡೆದಿದ್ದನು. ವಿಶಾಲ ಹೃದಯವುಳ್ಳ ಈತನು ಅದೇ ಹೆಸರಿನಿಂದ ಪ್ರಸಿದ್ಧನಾಗಿದ್ದು, ಒಳ್ಳೆಯ ನೀತಿ ಮಾರ್ಗಗಳಿಂದ ಸದಾಚಾರಸಂಪನ್ನನಾಗಿ ತನ್ನ ಐದು ಜನ ಸತ್ಪುತ್ರರೊಡನಿದ್ದನು.

ವಿಪ್ರಸ್ಯಾಸ್ಯ ಕನಿಷ್ಠಸ್ತು ತನಯೋ ವಿನಯೋಜ್ಜ್ವಲಃ ।
ವಾಗ್ಗೇಯಕಾರಕೋಽಲಾಸೀಚ್ಚಿತ್ರಗೀತಿ ವಿಶಾರದಃ ॥ ೨೬ ॥

'ರಾಮ ಏವ ಪರಂ ಬ್ರಹ್ಮೇ'ತ್ಯುಪಾಸ್ಯಾಯಂ ಯತೋ ಹರಿಮ್ ।
ತತಸ್ತಂ ಮನುಜಾನಾಮ್ನಾ ರಾಮಬ್ರಹ್ಮಾಣಮಬ್ರುವನ್ ॥ ೨೭ ॥

ಈ ಬ್ರಾಹ್ಮಣನ ಕೊನೆಯ ಮಗನು ಚಿತ್ರಗೀತಿಗಳಲ್ಲಿ ವಿಶಾರದನಾಗಿ, ವಾಗ್ಗೇಯ ಕಾರನಾಗಿ ಅತ್ಯಂತ ವಿನಯಶೀಲನಾಗಿದ್ದನು. 'ರಾಮನೇ ಪರಬ್ರಹ್ಮ' ಎಂದು ಉಪಾಸನೆ ಮಾಡುವುದರ ಮೂಲಕ ಹರಿಯನ್ನು ರಾಮ ಎಂದು ಕರೆಯುವಂತೆ, ಈತನನ್ನು ಎಲ್ಲರೂ ರಾಮಬ್ರಹ್ಮ ಎಂದು ಕರೆಯುತ್ತಿದ್ದರು.

ಷಡಂಗಸಹಿತಾನ್ ವೇದಾನ್ ಶೈಶವೇಽಧೀತ್ಯ ಸದ್ಗುರೋಃ ।
ತದರ್ಥಾಂಶ್ಚ ವಿಚಾರ್ಯಾಸೌ ಸ್ನಾತಕವ್ರತಮಾದಧೇ ॥ ೨೮ ॥

ದಿವಾ ದೋಷಾ ಪ್ರಗೇ ಸಾಯಂ ಸದಾ ರಾಮಂ ಪ್ರಕೀರ್ತಯನ್ ।
ನೈಷ್ಠಿಕಬ್ರಹ್ಮಚರ್ಯೇಣಾನಿನೀಷತ್ ಸಮಯಂ ನಿಜಮ್ ॥ ೨೯ ॥

ಬಾಲ್ಯದಲ್ಲೇ ಒಳ್ಳೆಯ ಗುರುವಿನಿಂದ ವೇದ ಮತ್ತು ವೇದಾಂಗಗಳನ್ನು ಅಧ್ಯಯನ ಮಾಡಿ, ಅವುಗಳ ಅರ್ಥವನ್ನು ಚೆನ್ನಾಗಿ ಮಂಥನ ಮಾಡಿ ಪಂಡಿತನಾದ ರಾಮಬ್ರಹ್ಮನು, ಸದಾಕಾಲ ರಾಮಕೀರ್ತನೆಯನ್ನು ಮಾಡುತ್ತಾ ನೈಷ್ಠಿಕ ಬ್ರಹ್ಮಚಾರಿಯಾಗಿ ಕಾಲಯಾಪನೆ ಮಾಡುತ್ತಿದ್ದನು.

ಕದಾಚಿತ್ ಸದಯೋ ರಾಮಃ ಸತ್ಸಂಗೀತೋದ್ಧಿಧೀರ್ಷಯಾ ।
ತದ್ಭಕ್ತಿಮುದಿತೋಽವಾದಿದೇನಂ ಲೋಚನಗೋಚರಃ ॥ ೩೦ ॥

ದಯಾಮಯನಾದ ಹಾಗೂ ಸತ್‌ಸಂಗೀತಸಾಗರದಲ್ಲಿ ಮುಳುಗಿದ್ದ ಈ ರಾಮ ಬ್ರಹ್ಮನ ಭಕ್ತಿಯಿಂದ ಸಂತೋಷಗೊಂಡ ಒಬ್ಬ ಬ್ರಾಹ್ಮಣನು ಇವನನ್ನು ಕುರಿತು ಒಂದು ಸಮಯದಲ್ಲಿ ಹೀಗೆ ಹೇಳಿದನು—

"ಅಯಿ ಸೌಮ್ಯ ! ವಿರಕ್ತ್ಯಾಲಂ, ಲೋಕಯಾತ್ರಾಪ್ರವೃತ್ತಯೇ ।
ಅನುರೂಪಗುಣಾಂ ಕನ್ಯಾಂ ಪರಿಣೀಯ ಕೃತೀ ಭವೇ ॥ ೩೧ ॥

ತಸ್ಯಾಮಸ್ಯ ಸುದೇಶಸ್ಯ ಖ್ಯಾಪಕೋ ಗಾಯಕಾಗ್ರಣೀಃ ।
ಸತ್ಪುತ್ರಃ ಪ್ರತಿಭಾಶಾಲೀ ಜಗತ್ಪೂಜ್ಯೋ ಜನಿಷ್ಯತೇ ॥ ೩೨ ॥

ಅನಾಚಾರಿತ ಧರ್ಮಸ್ಯ ಹ್ಯಪಿತೃಋಣಹಾರಿಣಃ ।
ನಸ್ಮೃತಾ ಸದ್ಗತಿಃ ಪ್ರಾಜ್ಞೈರತೋ ಭೂಯಾಃ ಸುಪುತ್ರವಾನ್'' ॥ ೩೩ ॥

"ಎಲೈ ಸೌಮ್ಯನೇ! ನಿನ್ನ ವಿರಕ್ತಿಯನ್ನು ಸಾಕು ಮಾಡು. ಈ ಭೂಮಿಯಲ್ಲಿ ಸಂಸಾರಿಯಾಗಿ ಜೀವಿಸಲು ಅನುರೂಪಳಾದ ಕನ್ಯೆಯನ್ನು ವಿವಾಹವಾಗಿ ಕೃತಾರ್ಥನಾಗು. ಧರ್ಮ ಆಚರಿಸದಿರುವ, ತಂದೆಯ ಋಣವನ್ನು ತೀರಿಸದಿರುವ ಬುದ್ಧಿವಂತರಿಂದ ಸದ್ಗತಿ ಉಂಟಾಗುವುದಿಲ್ಲ. ಆದ್ದರಿಂದ, ನೀನು ಪುತ್ರನನ್ನು ಪಡೆಯುವವನಾಗು. ನಿನ್ನ ಧರ್ಮಪತ್ನಿಯಲ್ಲಿ ಅತ್ಯಂತ ಖ್ಯಾತಿಯನ್ನು ಪಡೆಯುವ, ಪ್ರತಿಭಾಶಾಲಿಯೂ, ಗಾಯಕ ಶ್ರೇಷ್ಠನೂ, ಜಗತ್ಪೂಜ್ಯನೂ ಆದ ಸುಪುತ್ರನು ಜನಿಸುವನು.''

ಇತಿ ಶ್ರುತ್ವಾ ಪ್ರಣಮ್ಯಾಮುಂ ತದೀಯಾಜ್ಞಾ ಯದಾಸ್ಮರೇತ್ ।
ತದೈವ ದ್ವಿಜಶಾರ್ದೂಲಃ ಕಶ್ಚಿದೇನಂ ಸಮಾಗಮತ್ ॥ ೩೪ ॥

ಈ ರೀತಿಯ ಮಾತನ್ನು ಕೇಳಿ ಅವನಿಗೆ ನಮಸ್ಕರಿಸಿದನು. ಅದೇ ಸಮಯದಲ್ಲಿ ಮತ್ತೊಬ್ಬ ಬ್ರಾಹ್ಮಣನು ಅಲ್ಲಿಗೆ ಬಂದು ರಾಮಬ್ರಹ್ಮನನ್ನು ಕಂಡು ಹೀಗೆ ಹೇಳಿದನು—

''ರಾಮಬ್ರಹ್ಮನ್! ವಧೂರತ್ನ ಜನಕೋಽಸ್ಮಿ, ಭವಾನ್ ಯದಿ ।
ಮಜ್ಜಾಮಾತಾ, ಸುಪುತ್ರಸ್ಯ ಮಜ್ಜಾಮಾತಾ ಭವಿಷ್ಯತಿ'' ॥ ೩೫ ॥

''ಎಲೈ ರಾಮಬ್ರಹ್ಮನೇ! ನಾನು ವಧೂರತ್ನಳ ತಂದೆ. ನೀನು ನನ್ನ ಅಳಿಯನಾಗು. ನನ್ನ ಪುತ್ರಿಯಾದ ಇವಳು ನಿನ್ನಿಂದಾಗಿ ಸುಪುತ್ರನ ತಾಯಿಯಾಗುವಳು.''

ಇತಿ ಪ್ರಾರ್ಥಯಮಾನಸ್ಯ ಕನ್ಯಾಂ ಧನ್ಯತಮಾಂ ಬುಧಃ ।
ಅನನ್ಯಲಭ್ಯಾಮಭ್ಯರ್ಚ್ಯಾಮುಪಯೇಮೇ ವಿಧಾನತಃ ॥ ೩೬ ॥

ಹೀಗೆ ಪ್ರಾರ್ಥಿಸಲ್ಪಟ್ಟ ರಾಮಬ್ರಹ್ಮನು, ಬೇರೆಲ್ಲೂ ದೊರೆಯದ ಕನ್ಯಾರತ್ನವನ್ನು ಶಾಸ್ತ್ರೋಕ್ತಪ್ರಕಾರವಾಗಿ ವಿವಾಹವಾದನು.

ಋತಾವುಪೇತ್ಯ ತಾಂ ಪೂತಾಂ ಶೋಭನಾಯಾಮ್ ಶರದ್ಯಯಮ್ ।
ಕುರ್ವನ್ ಕುವಲಯೋಲ್ಲಾಸಂ ರೇಜೇ ವಿಷ್ಣುಪದಾಶ್ರಯಃ ॥ ೩೭ ॥

ಕಾಂತಾ ನಾಮ್ನಾಪಿ ಶಾಂತಾಂ ತಾಂ ಸಸಾಧ್ವೀಂ ಪಾಪಸಾಧ್ವಸಃ ।
ಸತ್ಪುತ್ರಲಿಪ್ಸಯಾ ಧರ್ಮ್ಯೈಃ ಕ್ರೀಡನ್ನೈರಪ್ಯತೋಷಯತ್ ॥ ೩೮ ॥

ಅಧ್ಯಾಪಯನ್ ಶ್ರುತೀರ್ಬಾಲಾನಾಮ್ಪೃಶನ್ ಬ್ರಹ್ಮವೈಭವಮ್ ।
ಭಜಂಶ್ಚ ಜಾನಕೀಜಾನೀಂ ಕಾಲಮೇಷ ಮುದಾಽಕ್ಷಿಪತ್ ॥ ೩೯ ॥

ಪವಿತ್ರಳಾದ ಆ ಶೋಭನಾಂಗಿಯನ್ನು ಶರದೃತುವಿನಲ್ಲಿ ಸೇರಿ, ಚಂದ್ರನು ನೈದಿಲೆಯನ್ನು ವಿಕಸಿಸುವಂತೆ, ಆ ಮನೋನ್ಮಣಿಯ ಹೃದಯಕುಸುಮಗಳು ಅರಳುವಂತೆ ಮಾಡಿದನು. ಹೆಸರಿನಿಂದಲೂ, ಸ್ವಭಾವದಿಂದಲೂ ಶಾಂತಳಾದ, ಪಾಪಗಳನ್ನರಿಯದ

ಸಾಧ್ವೀಮಣಿಯಾದ ಕಾಂತೆಯನ್ನು ಧರ್ಮಮಾರ್ಗದಿಂದ ಪುತ್ರಾಪೇಕ್ಷೆಯಾಗಿ ರಂಜಿಸಿದನು. ಹುಡುಗರಿಗೆ ವೇದಗಳನ್ನು ಹೇಳಿಕೊಡುತ್ತಾ, ಸತ್ಯಮಾರ್ಗದಿಂದ ಬ್ರಹ್ಮವೈಭವವನ್ನು ಅನುಭವಿಸುತ್ತಾ ಜಾನಕಿಯಂತಿರುವ ಪತ್ನಿಯೊಡನೆ ಸಂತೋಷವಾಗಿ ರಾಮಬ್ರಹ್ಮನು ಕಾಲಯಾಪನೆ ಮಾಡುತ್ತಿದ್ದನು.

ಜಾತು: ಪಂಚನದಕ್ಷೇತ್ರೇ ಸಪ್ತಸ್ಥಾನಮಹೋತ್ಸವಮ್ ।
ಪ್ರೇಕ್ಷ್ಯ ತೌ ದಂಪತೀ ಶಂಭುಂ ತತ್ರತ್ಯಂ ಚ ಪ್ರಣೇಮತು: ॥ ೪೦ ॥

ಒಂದು ಸಲ ಪಂಚನದ ಕ್ಷೇತ್ರದಲ್ಲಿ ಸಪ್ತಸ್ಥಾನ ಮಹೋತ್ಸವದ ಸಂದರ್ಭದಲ್ಲಿ ಅಲ್ಲಿಯ ದೇವರ ದರ್ಶನ ಮಾಡುವ ಆಕಾಂಕ್ಷೆಯಿಂದ ಈ ದಂಪತಿಗಳು ಅಲ್ಲಿಗೆ ಹೋಗಿ ದೇವರಿಗೆ ಪೂಜೆ ಸಲ್ಲಿಸಿದರು.

ಅಥ ತಸ್ಯ ಗುಣಾಢ್ಯಸ್ಯ ತನಯೋಽಜನಿ ಕಶ್ಚನ ।
ಬಾಲ್ಯೇಪಿ ಯತ್ಸ್ವಭಾವೋಽಭೂತ್ ಸಂಜಿಘೃಕ್ಷಾ ಸಮತ್ಸರಾ ॥ ೪೧ ॥

ಪುತ್ರಂ ಪಂಚನದಾಧೀಶ ಶಿವನಿತ್ಯಸ್ಮೃತೀಚ್ಛಯಾ ।
ತಂ ಜಪ್ಯೇಶಾಭಿಧಂ ಚಕ್ರೇ ತದ್ದರ್ಶನಭವಂ ಸುಧೀ: ॥ ೪೨ ॥

ಇದಾದನಂತರ ಗುಣಶಾಲಿಗಳಾದ ಈ ದಂಪತಿಗಳಿಗೆ ಒಬ್ಬ ಮಗನು ಜನಿಸಿದನು. ಬಾಲ್ಯದಲ್ಲಿಯೇ ಮತ್ಸರ ಸ್ವಭಾವವು ಆ ಪುತ್ರನದಾಗಿತ್ತು. ಈ ಪುತ್ರನನ್ನು ಪಂಚನದೀಶ್ವರನಾದ ಶಿವನ ಧ್ಯಾನದಲ್ಲಿ ತೊಡಗಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ, ಬುದ್ಧಿವಂತನಾದ ರಾಮಬ್ರಹ್ಮನು ಪುತ್ರನಿಗೆ ಜಪ್ಯೇಶನೆಂದು ನಾಮಕರಣ ಮಾಡಿದನು.

ಪಂಚಾಪಗೇಶನಾಮ್ನಾಪಿ ಪ್ರಥತೋಽಸೌ ಯತ: ಶಿವ: ।
ತತ: ಪಂಚಾಪಗೇಶೇತಿ ಖ್ಯಾತೋಽಭೂದ್ ಭೂಸುರಾತ್ಮಜ: ॥ ೪೩ ॥

ಸೋಽಪಿ ಶಾಖಾಮಧೀತ್ಯ ಸ್ವಾಂ ವೇದಶಾಸ್ತ್ರವಿಶಾರದ: ।
ಅಖರ್ವಗರ್ವದುರ್ವಾರ: ಪಥಾ ಕೇನಾಪ್ಯವರ್ತತ ॥ ೪೪ ॥

ಪಂಚಾಪಗೇಶನೆಂದು ಶಿವನು ಹೇಗೆ ಪ್ರಸಿದ್ಧನಾಗಿದ್ದನೋ ಹಾಗೆಯೇ ಈ ಬ್ರಾಹ್ಮಣ ಕುಮಾರನು ಪಂಚಾಪಗೇಶ ಎಂಬುದಾಗಿ ಖ್ಯಾತಿ ಪಡೆದನು. ಈ ಕುಮಾರನು ವೇದ, ಶಾಸ್ತ್ರಗಳ ಅಧ್ಯಯನ ಮಾಡಿ ಶಾಸ್ತ್ರವಿಶಾರದನಾದನು. ಹಾಗೆಯೇ ಇತರರಿಂದ ಸಹಿಸಲಾಗದ ಅತಿ ದೀರ್ಘವಾದ ಅಹಂಕಾರಿಯೂ, ಸ್ವೇಚ್ಛಾಚಾರಿಯೂ ಆದನು.

ತತ್ತಾದೃಕ್ಷಂ ಸುತಂ ಪ್ರಾಪ್ಯ ಸ್ವಸ್ವಭಾವವಿರೋಧಿನಮ್ ।
ರಾಮಬ್ರಹ್ಮಾ ಪುನಾ ರಾಮಂ ಪ್ರಾಜ್ಞಂ ಪುತ್ರಮಯಾಚತ ॥ ೪೫ ॥

ತನ್ನ ಸ್ವಭಾವಕ್ಕೆ ವಿರುದ್ಧವಾದ ಸ್ವಭಾವವನ್ನು ತನ್ನ ಪುತ್ರನಲ್ಲಿ ನೋಡಿದ ರಾಮಬ್ರಹ್ಮನು ಪುನ: ಶ್ರೀರಾಮನಲ್ಲಿ ಪ್ರಾಜ್ಞನಾದ ಪುತ್ರನಿಗಾಗಿ ಬೇಡಿಕೊಂಡನು.

ಜಾತೇನಾಪಿ ಸುತೇನೈವಂ ಪಿತ್ರೋಃ ಕ್ಷೇಮಮನಿಶ್ಚಿತಾ ।
ಪುಂನಾಮ್ನೋ ನರಕಾತ್ ಪಿತ್ರೋರ್ನಿವೃತ್ತಿಸ್ತು ಕಥಂ ಭವೇತ್ ॥ ೪೬ ॥

ಅತೋಽತಿಯುಮತಿದುಃಖಾರ್ತೋ ಗತಿಹೀನೋ ಯತೀಶ್ವರಮ್ ।
ಕಮಪ್ಯಾಶ್ರಿತ್ಯ ವೈರಾಗ್ಯಾದ್ ಭಿಕ್ಷುಭಾವಮಪೈಕ್ಷತ ॥ ೪೭ ॥

ಇಂಥ ಪುತ್ರನಿಂದ ತಂದೆಯ ಕ್ಷೇಮವು ನಿಶ್ಚಯವಲ್ಲ. ಏಕೆಂದರೆ ಇಂಥ ಪುತ್ರನಿಂದ 'ಪುಂ' ಎಂಬ ನರಕವಾಸವು ಹೇಗೆ ತಾನೇ ನಿವೃತ್ತಿಯಾದೀತು ?

ಅತಿ ದುಃಖದಿಂದ ಕೂಡಿದವನಾಗಿ, ಸದ್ಗತಿಹೀನನಾಗಿ, ವೈರಾಗ್ಯಭಾವದಿಂದ ಭಿಕ್ಷುಭಾವವನ್ನು ಹೊಂದಿ ಒಬ್ಬ ಯತಿಯನ್ನು ಆಶ್ರಯಿಸಿದನು.

ಅಪರೋಕ್ಷೀಕೃತಶ್ರೀಶಃ ಸಮುಪೇಕ್ಷಿತ ಸಂಸೃತಿಃ ।
ಅಪೇಕ್ಷಿತ ಪ್ರದಾತಾಸೌ ಗುರುರಾಜಸ್ತಮಬ್ರವೀತ್ ॥ ೪೮ ॥

ಶ್ರೀಮನ್ನಾರಾಯಣನನ್ನು ಅಪರೋಕ್ಷವಾಗಿ ಕಂಡಿದ್ದ, ಅಪೇಕ್ಷಿಸಿದ್ದನ್ನು ಕೊಡುವಂತಹ, ಸಂಸಾರವನ್ನು ಉಪೇಕ್ಷಿಸಿದ್ದ ಆ ಗುರುರಾಜನು ರಾಮಬ್ರಹ್ಮನನ್ನು ಕುರಿತು ಹೀಗೆ ಹೇಳಿದನು—

"ರಾಮಬ್ರಹ್ಮನ್ ! ವಿವೇಕಾಢ್ಯ ! ವಿದಿತಾಗಮ ! ಧಾರ್ಮಿಕ ! ।
ಸಾಹಸಂ ಭೈಕ್ಷವೇ ಪಕ್ಷೇ ಸಾಂಪ್ರತಂ ತೇ ನ ಸಾಂಪ್ರತಮ್ ॥ ೪೯ ॥

ಗಾರ್ಹಸ್ಥ್ಯೇ ಧರ್ಮ ಏವ ತ್ವಂ ವರ್ತಸ್ವೇಶ್ವರ ಸೇವಕಃ ।
'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತಗಚ್ಛತಿ' ॥ ೫೦ ॥

ತ್ವಯಾ ನ ಹ್ಯಕೃತಾ ಧರ್ಮಾಃ ನಾಪಿ ಪುಣ್ಯಮನಾರ್ಜಿತಮ್ ।
ಅಥಾಪಿ ಯದಿ ನ ಶ್ರೇಯಸ್ತತ್ರ ದೈವಂ ಹಿ ಬಾಧಕಮ್ ॥ ೫೦ ॥

ಏತಸ್ಯಾಸ್ತಿ ಪುರಸ್ಯೇಶಃ ಸರ್ವಕ್ಷೇಮಪ್ರದಾಯಕಃ ।
ಜಾನೇಹಂ ತವ ವಂಶ್ಯಾನಾಂ ಕುಲದೇವಮಿಮಂ ಶಿವಮ್ ॥ ೫೨ ॥

ಮಹೇಂದ್ರಾಯ ಪುರಾದತ್ತಂ ಹರಿಣಾ ಶಿವವಿಗ್ರಹಮ್ ।
ಮುಚುಕುಂದ ನರೇಂದ್ರೇಣ ಪ್ರಾಪ್ತಂ ಶತಮುಖಾನ್ಮಖೈಃ ॥ ೫೩ ॥

ಲಸಂತಮಾಲಯೇ ದಿವ್ಯೇ ಬಹುಚಿತ್ರಕಲಾಲಯೇ ।
ಮನುಷ್ಯದುಷ್ಕರೇ ಯತ್ನಾದ್ ವಿಶ್ವಕರ್ಮವಿನಿರ್ಮಿತೇ ॥ ೫೪ ॥

ಮನುನೀತಿದೃಶಶ್ಚೋಲಮಹೀಪಸ್ಯ ಸುಧರ್ಮಣಃ ।
ಗೋವತ್ಸಾರ್ಥಂ ಸುತಂ ಹಂತುಃ ಪ್ರತ್ಯಕ್ಷಕುಲದೈವತಮ್ ॥ ೫೫ ॥

ಸಮಯಾಚಾರ್ಯವರ್ಯೈಸ್ತೈಶ್ಚತುರ್ಭಿರಪಿ ಸಂಸ್ತುತಮ್ ।
ಜೀವನ್ಮುಕ್ತ ಜನೋಪಾಸ್ಯಂ ಮಂದಭಾಗ್ಯದುರಾಸದಮ್ ॥ ೫೬ ॥

ಶಿವಂ ಶ್ರೀತ್ಯಾಗರಾಜಾಖ್ಯಮಿಮಂ ವಂಶ್ಯಾಸ್ತವಾಖಿಲಾಃ ।
ನಿಷೇವ್ಯೈಪ್ಸಿತಂ ಸರ್ವಂ ಶಿವಂ ಪ್ರಾಪುರಿತಿ ಸ್ಥಿತಿಃ ॥ ೫೭ ॥

'ವಿಷ್ಣುಭಕ್ತಃ ಶಿವದ್ವೇಷೀ, ವಿಷ್ಣುದ್ವೇಷೀ ಶಿವಪ್ರಿಯಃ ।
ತಾವುಭೌ ನರಕಂ ಯಾತೋ ಯಾವಚ್ಚಂದ್ರ ದಿವಾಕರಮ್' ॥ ೫೮ ॥

ತಸ್ಮಾತ್ ಸೌಮ್ಯ ! ಸದಾರಸ್ತ್ವಂ ಸದಾ ರಾಮಂ ಭಜನ್ನಪಿ ।
ಸೇವಸ್ವಂ ಕುಲದೇವಂ ತೇ ತ್ಯಾಗರಾಜಮಹೇಶ್ವರಮ್ ॥ ೫೯ ॥

ತ್ವದ್ಭಕ್ತಿಭಾರಸಂತುಷ್ಟಃ ಸರ್ವದೋಮಾಧತ್ರಃ ಪ್ರಭುಃ ।
ಕಲ್ಯಾಣಾನಿ ವಿದಧ್ಯಾತ್ತೇ ಕರುಣಾವರುಣಾಲಯಃ ॥ ೬೦ ॥

ತದ್ದಯಾಪ್ರಭವಂ ಪುತ್ರಂ ತ್ಯಾಗರಾಜಾಭಿಧಂ ಕುರು ।
ಸ ಸೂನುರ್ಬ್ರಹ್ಮವಿಜ್ಞಾನೀ ಭೂಯಾತ್ತೇ ಕುಲದೀಪಕಃ ॥ ೬೧ ॥

ತ್ರೈಲೋಕ್ಯಶ್ಲಾಘ್ಯಚಾರಿತ್ರಃ ಸಂಗೀತಾಂಬುಧಿಪಾರಗಃ ।
ಅನ್ಯದುರ್ಲಭಯಾ ಮೂರ್ತ್ಯಾ ಕೀರ್ತ್ಯಾ ವಿಜೇಷ್ಯತೇ'' ॥ ೬೨ ॥

''ಎಲೈ ರಾಮಬ್ರಹ್ಮನೇ ! ವಿವೇಕಿಯೇ, ಆಗಮಗಳನ್ನು ಅರಿತವನೇ, ಧರ್ಮಿಷ್ಠನೇ, ಗೃಹಸ್ಥನಾದ ನೀನು ಭಿಕ್ಷುಭಾವ ಹೊಂದುವ ಸಾಹಸ ಮಾಡಬೇಡ. ಅದು ನಿನಗೆ ಶೋಭಿಸುವುದಿಲ್ಲ.

ಗೃಹಸ್ಥಧರ್ಮದಲ್ಲಿರುವುದೇ ಈಗಿನ ನಿನ್ನ ಧರ್ಮ. ನೀನು ಗೃಹಸ್ಥನಾಗಿದ್ದುಕೊಂಡೇ ಈಶ್ವರ ಸೇವಕನಾಗಿರು. 'ಒಳ್ಳೆಯದನ್ನು ಮಾಡುವ ಯಾವನೊಬ್ಬನೂ ದುರ್ಗತಿಯನ್ನು ಪಡೆಯುವುದಿಲ್ಲ. ಅಲ್ಲವೇ ?'

ನಿನ್ನಿಂದ ಅಧರ್ಮಗಳು ಆಚರಿಸಲ್ಪಟ್ಟಿಲ್ಲ. ಪುಣ್ಯವನ್ನು ಸಂಪಾದಿಸಿದ್ದೀಯೆ. ಆದರೂ ಸಹ ನಿನಗೆ ಶ್ರೇಯಸ್ಸು ಆಗದಿದ್ದಲ್ಲಿ ಅದು ದೈವದ ತೊಂದರೆಯೇ ವಿನಹಾ ಬೇರಾವುದೂ ಅಲ್ಲ.

(ಇದಕ್ಕಿರುವ ದಾರಿ ಒಂದೇ.) ಸಮಸ್ತ ಕ್ಷೇಮಪಾಲಕನಾದ, ಈ ಪಟ್ಟಣದ ಒಡೆಯನಾದ, ನಿನ್ನ ವಂಶದ ಕುಲದೇವನಾದ ಈ ಶಿವನನ್ನು ನಾನು ತಿಳಿದಿದ್ದೇನೆ.

ಈ ಶಿವನ ವಿಗ್ರಹವು ಹರಿಯಿಂದ ಬಹಳ ಹಿಂದೆಯೇ ಮಹೇಂದ್ರನಿಗೆ ಕೊಡಲ್ಪಟ್ಟಿತು. ನಂತರ ಕಾಲಾಂತರದಲ್ಲಿ ಮಹೇಂದ್ರನಿಂದ ಮುಚುಕುಂದ ದೊರೆಗೆ ದೊರೆಯಿತು.

ಅನೇಕ ಚಿತ್ರಕಲೆಗಳ ಆಗರವಾದ ದೇವತೆಗಳ ಗೃಹದಲ್ಲಿ ರಾರಾಜಿಸುತ್ತಿದ್ದ ಇದು ಮನುಷ್ಯರಿಂದ ನಿರ್ಮಿಸಲು ಅತಿ ಕಷ್ಟಸಾಧ್ಯವಾದುದು ಹಾಗೂ ವಿಶ್ವಕರ್ಮನಿಂದಲೇ ಬಹಳ ಪ್ರಯತ್ನದಿಂದ ನಿರ್ಮಿಸಲ್ಪಟ್ಟುದು.

ಇದಕ್ಕೆ ಒಂದು ಕಥೆಯಿದೆ. ಸುಧರ್ಮಿಯನಾದ, ಮನುವಿನ ನೀತಿಯನ್ನು ಚೆನ್ನಾಗಿ ಅರಿತಿದ್ದ ಚೋಳರಾಜನೊಬ್ಬನು, ತನ್ನ ಮಗನನ್ನು ರಥದಲ್ಲಿ ಕೂರಿಸಿಕೊಂಡು ಹೋಗು

ವಾಗ, ಒಂದು ಕರುವಿನ ಮಮತೆಯಿಂದ ಮಗನನ್ನು ಕೊಂದನು. ಇಂತಹ ಚಕ್ರವರ್ತಿಯ ಪ್ರತ್ಯಕ್ಷ ಕುಲದೇವತೆಯು ಇದು.

ಶೈವಮತ ಪ್ರಚಾರಾರ್ಥವಾಗಿ ಜನ್ಮವೆತ್ತಿ ಬಂದಿದ್ದ ಶ್ರೀ ಜ್ಞಾನಸಂಬಂಧರ್, ಶ್ರೀ ವಾಗೀಶ, ಶ್ರೀ ಸುಂದರಮೂರ್ತಿ ಮತ್ತು ಶ್ರೀ ಮಾಣಿಕ್ಯವಾಚಕರೆಂಬ ಪ್ರಸಿದ್ಧರಾದ ದ್ರಾವಿಡಭಾಷಾ ಕವಿಗಳು, ಮಂದಭಾಗ್ಯರಿಂದ ಹೊಂದಲಶಕ್ಯವಾದ, ಜೀವನ್ಮುಕ್ತರಿಂದ ಧ್ಯಾನಿಸಲ್ಪಡುವ ಈ ಶಿವನನ್ನು ಚೆನ್ನಾಗಿ ಸ್ತುತಿಸುತ್ತಿದ್ದರು.

ನಿನ್ನ ವಂಶದವರೆಲ್ಲರೂ ತ್ಯಾಗರಾಜನೆಂಬ ಹೆಸರುಳ್ಳ ಈ ಶಿವನನ್ನು ಚೆನ್ನಾಗಿ ಪೂಜಿಸಿ ಉತ್ತಮವಾದ ಗತಿಯನ್ನು ಹೊಂದಿರುವರು.

ವಿಷ್ಣುಭಕ್ತನಾದ ಶಿವದ್ವೇಷಿಯೂ ಹಾಗೂ ಶಿವಭಕ್ತನಾದ ವಿಷ್ಣುದ್ವೇಷಿಯೂ ಎಲ್ಲಿಯವರೆಗೆ ಚಂದ್ರಸೂರ್ಯರಿರುವರೋ ಅಲ್ಲಿಯವರೆಗೆ ನರಕವನ್ನು ಹೊಂದುವರು.

ಆದುದರಿಂದ, ಎಲೈ ಸೌಮ್ಯನೇ! ನೀನು ಪತ್ನೀಸಮೇತನಾಗಿ ಯಾವಾಗಲೂ ರಾಮನನ್ನು ಭಜಿಸು. ಈಶ್ವರನೂ, ಕುಲದೇವನೂ ಆದ ತ್ಯಾಗರಾಜನನ್ನು ಚೆನ್ನಾಗಿ ಸೇವಿಸು.

ಎಲ್ಲರನ್ನೂ ರಕ್ಷಿಸುವ, ಕರುಣಾಸಾಗರನಾದ, ಸಮಸ್ತರಿಗೂ ಸನ್ಮಂಗಳವನ್ನುಂಟು ಮಾಡುವ ಒಡೆಯನಾದ ಅವನು, ನಿನ್ನ ಭಕ್ತಿಯ ಭಾವದಿಂದ ಸಂತೋಷಗೊಂಡು, ನಿನಗೆ ಮಂಗಳವನ್ನುಂಟುಮಾಡುತ್ತಾನೆ.

ಅವನ ಕರುಣೆಯಿಂದ ನೀನು ಪುತ್ರನೊಬ್ಬನನ್ನು ಪಡೆಯುವೆ. ಅವನಿಗೆ ತ್ಯಾಗರಾಜ ನೆಂದು ಹೆಸರಿಡು. ಅವನು ಬ್ರಹ್ಮಜ್ಞಾನಿಯಾಗಿ, ನಿನ್ನ ಕುಲಕ್ಕೆ ಬಹಳ ಹೆಚ್ಚಿನ ಕೀರ್ತಿ ಯನ್ನು ತರುತ್ತಾನೆ. ಸಂಗೀತಸಾಗರದಲ್ಲಿ ಅನರ್ಘ್ಯರತ್ನವಾಗಿ, ಮೂರು ಲೋಕಗಳಲ್ಲಿ ಕೀರ್ತಿಶ್ರೇಷ್ಠನಾಗಿ, ಬೇರೆಯವರಿಂದ ಗಳಿಸಲಾಗದ ಕೀರ್ತಿಯನ್ನು ಪಡೆದು ವಿಜೃಂಭಿಸು ತ್ತಾನೆ.''

ಇತ್ಯುಕ್ತ್ವಾ ವಿರತೇ ಭಿಕ್ಷೌ ತ್ರಿಕಾಲಜ್ಞೇ ತಿರೋಹಿತೇ ।
ಅಗಮ್ಯಮಹಿಮಾನಂ ತಂ ಪ್ರಣನಾಮ ಪ್ರಿಯಾಸುತಃ ॥ ೬೩ ॥

ಹೀಗೆ ಹೇಳಿ ತ್ರಿಕಾಲಜ್ಞನೂ, ವಿರತಿಯೂ ಆದ ಯತಿಯು ಅದೃಶ್ಯನಾದನು. ರಾಮಬ್ರಹ್ಮನು ಅತ್ಯಂತ ಮಹಿಮಾನ್ವಿತನಾದ ಆ ಯತಿಗೆ ಪುನಃ ವಂದಿಸಿದನು.

ತದಾಜ್ಞಾಂ ಶಿರಸಾದಾಯ ತದಾ ತಸ್ಯಾಶಿಷಸ್ತಥಾ ।
ಸಪತ್ನೀಕಃ ಶುಚಿರ್ಭೂತ್ವಾ ತ್ಯಾಗರಾಜಮಸೇವತ ॥ ೬೪ ॥

ಉಂಛವೃತ್ತ್ಯಾರ್ಜಿತೈರರ್ಥೈರತಿಥೀನುಪಭೋಜನವ್ ।
ಸಜ್ಜನಾನ್ ಶಿವಮಾಹಾತ್ಮ್ಯಂ ಶ್ರಾವಯನ್ ಶಂಕರಾಲಯೇ ॥ ೬೫ ॥

ಸುವ್ರತಾಂ ವ್ರತಖಿನ್ನಾತ್ಮಾ ತಾಂ ಶಾಂತಾಂ ಸಾಂತ್ವಯನ್ ಸದಾ ।
ಅವರ್ತ್ಮಗಾಮಿನಂ ಜಾತವುಪದೇಶೈರ್ವಶಂ ನಯನ್ ॥ ೬೬ ॥

ಆ ಯತಿಯ ಆಜ್ಞೆಯನ್ನು ಶಿರಸಾವಹಿಸಿ, ಅವನ ಆಶೀರ್ವಾದವನ್ನು ಪಡೆದ ನಂತರ ಪತ್ನಿಯೊಡಗೂಡಿ ಶುಚಿರ್ಭೂತನಾಗಿ ತ್ಯಾಗರಾಜಸ್ವಾಮಿಯನ್ನು ಸೇವಿಸಿದನು.

ಭಿಕ್ಷಾವೃತ್ತಿಯಿಂದ ದೊರೆತದ್ದನ್ನು ಅತಿಥಿ–ಅಭ್ಯಾಗತರಿಗೆ ಉಣಬಡಿಸುತ್ತಾ, ಶಂಕರಾಲಯದಲ್ಲಿ ಶಿವನ ಮಹಿಮೆಯನ್ನು ಸಜ್ಜನರಿಗೆ ತಿಳಿಸುತ್ತಾ ಕಾಲಯಾಪನೆ ಮಾಡ ತೊಡಗಿದನು.

ವ್ರತಗಳನ್ನು ಆಚರಿಸಿಯೂ ನಿರಾಶಳಾದ, ಸದ್ಗುಣಿಯಾದ ಆ ಶಾಂತಳನ್ನು ಯಾವಾಗಲೂ ಸಾಂತ್ವನಗೊಳಿಸುತ್ತಾ, ಉಪದೇಶಗಳನ್ನು ಮಾಡುತ್ತಾ, ಪುತ್ರಾಪೇಕ್ಷಿಯಾಗಿ ಸಂಯಮದಿಂದ ಕಾಲಯಾಪನೆ ಮಾಡುತ್ತಿದ್ದನು.

ಪಂಚಪಾಣಿ ಸ ವರ್ಷಾಣಿ ಕಥಂಚಿತ್ ಕಾಲಮಕ್ಷಿಪತ್ ।
ಅಪ್ರಸನ್ನೇಽಪಿ ಗೌರೀಶೇ ನೋತ್ಸಾಹಂ ಸೇವನೇಽತ್ಯಜನ್ ॥ ೭೭ ॥

ಬುಧವರಸುತಕಾಮಃ ಸೋಮರಾಜತ್ಕಪರ್ದಂ
ಫಣಿಗಣಮಣಿಭೂಷಂ ಪಾರ್ವತೀಶ್ಲಿಷ್ಟಮೂರ್ತಿಮ್ ।
ಸುರನರನಿಕರೇಡ್ಯಂ ತ್ಯಾಗರಾಜಾಭಿಧಂ ತಂ
ಭವಮುರುಭವನಾಶಂ ದಾರಯುಕ್ತಂ ಸ ಭೇಜೇ ॥ ೭೮ ॥

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತ ವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ಪ್ರಥಮ ಸರ್ಗಃ

ಹೇಗೋ ಬಹಳ ಕಷ್ಟಪಟ್ಟು ಐದಾರು ವರ್ಷಗಳನ್ನು ಕಳೆದನು. ಗೌರೀಶನು ಪ್ರಸನ್ನನಾಗದಿದ್ದರೂ ಸಹ ಅವನ ಸೇವೆಯಲ್ಲಿ ರಾಮಬ್ರಹ್ಮನು ಉತ್ಸಾಹವನ್ನು ಕಳೆದುಕೊಳ್ಳಲಿಲ್ಲ. ಚಂದ್ರಶೇಖರನೂ, ಸರ್ಪಭೂಷಣನೂ, ಪಾರ್ವತೀರಮಣನೂ, ದೇವತೆಗಳು ಮತ್ತು ಮಾನವರಿಂದ ಸೇವಿಸಲ್ಪಡುತ್ತ ಈ ಸಂಸಾರದ ಪಾಪಗಳನ್ನು ಹರಿಸುವವನೂ ಆದ ತ್ಯಾಗರಾಜಸ್ವಾಮಿಯನ್ನು ಸಪತ್ನೀಕನಾಗಿ ಚೆನ್ನಾಗಿ ಸೇವಿಸಿದನು.

ಇತಿ 'ಗಾಯಕ ಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ಮೊದಲನೆಯ ಸರ್ಗ

## ನ್ಯಾಯಶಿರೋಮಣಿ ಕೆ. ಎ. ಕೃಷ್ಣಶರ್ಮಕೃತ 'ಪದಾರ್ಥಚಂದ್ರಿಕಾ' ಎಂಬ ಲಘು ಟಿಪ್ಪಣಿ

# ಸರ್ಗ ಒಂದು

ತ್ಯಾಗರಾಜರ ವಿಜಯವೇ ಚರಿತ್ರೆಯಾಗಿರುವುದರಿಂದ ಈ ಗ್ರಂಥ ಅಂದರೆ ಕಾವ್ಯವು ತ್ಯಾಗರಾಜ ವಿಜಯ ಎಂಬುದಾಗಿದೆ. ಗಾಯಕಶಿಖಾಮಣಿಯು ರಚಿಸಿರುವಂಥ ಈ ಕಾವ್ಯದಲ್ಲಿ ಗಾಯಕಲೋಕದಲ್ಲಿ ಪ್ರಸಿದ್ಧವಾದ ಷಡ್ಜವೇ ಮೊದಲಾದ ಏಳು ಸ್ವರಗಳನ್ನು ಅನುಸರಿಸಿ ಏಳು ಸರ್ಗಗಳಲ್ಲೇ ರಚಿಸಿರುವುದು ವಿಶೇಷವಾಗಿದೆ. ಕವಿಯು ಮೊದಲನೆಯ ಸರ್ಗದಿಂದ ಏಳನೆಯ ಸರ್ಗದ ತನಕ ಷಡ್ಜ ಮೊದಲಾದ ಏಳು ಸ್ವರಗಳ ನೆನಪುಂಟುಮಾಡುವ ಅಕ್ಷರಗಳು ಅಥವಾ ಸ್ವರಗಳಿಂದ ಆರಂಭವಾಗುವ ಪದಗಳನ್ನು ಪ್ರಯೋಗಿಸಿ ಶ್ಲೋಕಗಳನ್ನು ಆರಂಭಿಸಿದ್ದಾನೆ. ಆದ್ದರಿಂದಲೇ ಮೊದಲ ಸರ್ಗದಲ್ಲಿ ಪ್ರಥಮಸ್ವರವಾದ, ಷಡ್ಜದ ಸಂಕೇತಾಕ್ಷರವಾದ ಸಕಾರವನ್ನು ಮೊದಲು ಪ್ರಯೋಗಿಸಿ 'ಸರ್ವಸ್ಯ' ಎಂದು ಆರಂಭಿಸಿದ್ದಾನೆ. ಇದೇ ರೀತಿಯಾಗಿ ಮುಂದೆ ಎರಡನೇ ಸರ್ಗದಿಂದ ಆರಂಭಿಸಿ ಕ್ರಮೇಣ ಏಳು ಸರ್ಗಗಳಲ್ಲಿ ರಿಷಭಾದಿ ಸ್ವರಗಳಿಂದಲೇ ಸರ್ಗಗಳು ಆರಂಭವಾಗುತ್ತವೆ.

೧. ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾಗುವ ಬ್ರಹ್ಮನು ಜಗತ್ತಿನ ಸೃಷ್ಟಿಗೆ ಕಾರಣನಾಗುವಂತೆ ಈ ನಾದಾತ್ಮಕನಾದ ಬ್ರಹ್ಮನಿಗೂ ಕೂಡ ಸಂತುಷ್ಟಿ ಮೊದಲಾದವುಗಳಿಂದ ನಿರೂಪಿತವಾದ ಸೃಷ್ಟಿಕರ್ತೃತ್ವವು ಅಡೆತಡೆಯಿಲ್ಲದೆ ಇದೆ ಎಂಬುದನ್ನು 'ಸರ್ವಸ್ಯ' ಎಂಬಿತ್ಯಾದಿಗಳಿಂದ ಹೇಳುತ್ತಾನೆ.

ಪಾತೃ–ರಕ್ಷಿತೃ=ರಕ್ಷಕ, ಆಧಿಃ–ಮಾನಸಿಕ ವ್ಯಥೆ, ವ್ಯಾಧಿಃ–ಶಾರೀರಿಕ ಬಾಧೆ.

೨. ವರ್ಣದ ಅಂದರೆ ಅಕಾರವೇ ಮೊದಲಾದ ಅಕ್ಷರಗಳ ಗುಂಪಿನದು ಎಂದರ್ಥ.

೩. ಮೂಲಾಧಾರಸ್ಥಿತ ಎಂದರೆ ನಾದೋತ್ಪತ್ತಿಯ ಮುಖ್ಯಸ್ಥಾನವಾಗಿರುವ ನಾಭಿ ಮಂಡಲದಲ್ಲಿರುವ ಎಂದರ್ಥ. ಗಜಾನನನಿಗೆ ಗಜವೆಂದು ಔಪಚಾರಿಕವಾದ ವ್ಯವಹಾರ.

೪. ವಾಗೀಶ್ವರೀಂ–ಸರಸ್ವತಿಯನ್ನು.

೫. ಅಜ್ಞಾನ ಎಂಬಿವೇ ಮೊದಲಾದವುಗಳಿಂದ ಕವಿಯು ತನ್ನ ಕುಲಗುರುಗಳಾದ ಶ್ರೀಮದಾಚಾರ್ಯರ ಪೂಜ್ಯಪಾದಗಳನ್ನು ನಮಸ್ಕರಿಸುತ್ತಾನೆ.

೬. ಆದಿಸ್ವರವು ಷಡ್ಜವು. ಅಥವಾ ಸ ಎಂಬುದು. ಅದೇ 'ಷಣ್ಮುಖಾಯ ನಮಃ' ಎಂಬ ಮೂಲ ಮಂತ್ರದಲ್ಲಿ ಯಾವನಿಗೆ ಬೀಜಾಕ್ಷರವಾಗಿರುವುದೋ ಅಂಥವನನ್ನು ಎಂದರ್ಥ. ಅಂತ್ಯಸ್ವರವು ನಿಷಾದ, ಕಿರಾತ ಎಂದರ್ಥ. ವಲ್ಲಿಯ ತಂದೆಯಾಗಿ ತನ್ನ ಮಾವನಾದ ಅವನಿಂದ ವಿಶೇಷವಾಗಿ ಸೇವೆಗೊಂಡವನು. ಗುಹಂ ಎಂದರೆ ಸುಬ್ರಹ್ಮಣ್ಯನನ್ನು ಎಂಬುದಾಗಿ ಕವಿಯಿಂದ ತನ್ನ ಉಪಾಸ್ಯ ದೇವತೆಯ ನಮಸ್ಕಾರಾಚರಣೆಯು

ಮಾಡಲ್ಪಟ್ಟಿದೆ. ಸಂಗೀತಶಾಸ್ತ್ರಾಭಿಮಾನಿದೇವತೆಯಾದ ಷಣ್ಮುಖನ ವಂದನೆಯೆಂದೂ ಹೇಳಬಹುದು.

೭. ತ್ಯಾಗರಾಜ ಎಂಬ ಹೆಸರಿನ ಸಾರ್ಥಕತೆಯನ್ನು ರಾಮ ಎಂಬೀ ಮೊದಲಾದವು ಗಳಿಂದ ಕವಿಯು ಸಮರ್ಥಿಸುತ್ತಾನೆ.

೮. ರಾಮ-ಮಾರುತಿ-ನಾರದ ಇವರುಗಳಿಗೆ ಪ್ರತ್ಯಕ್ಷ ಮಿತ್ರತ್ವವನ್ನು ಮುಂದಿನ ಕಥೆಯಲ್ಲಿ ನಿರೂಪಿಸಲಾಗುತ್ತದೆ.

೯. ಅಜ್ಞಾನರೂಪವಾದ ಕತ್ತಲೆ. ರವಿಗೆ ಅಂದರೆ ಸೂರ್ಯನಿಗೆ. ಪಾಪರೂಪ ವಾದುದು ಪರ್ವತಕ್ಕೆ. ಪವಿಗೆ ಅಂದರೆ ವಜ್ರಾಯುಧಕ್ಕೆ, ಕವಿಗೆ ಅಂದರೆ ಕವನ ಮಾಡು ವವನಿಗೆ. ಗಾನಕಲೆಯಾದ ಸಂಗೀತ ವಿದ್ಯೆಯು ವಿವಿಧ ಕೃತಿಗಳ ರಚನೆಯಿಂದ ಉದ್ಧಾರ ಗೊಂಡಿದೆ ಎಂದರ್ಥ.

೧೦. ನೀರನ್ನು ಕುಡಿಯುವ ಎಲ್ಲ ಜನರೂ ಆ ನೀರನ್ನು ಕೊಡುವ ಮೋಡದ ಸ್ವರೂಪವನ್ನು ಹೇಗೆ ವಿಮರ್ಶೆ ಮಾಡುವುದಿಲ್ಲವೋ ಆ ರೀತಿಯಾಗಿ ಎಂದು ದೃಷ್ಟಾಂತ.

೧೧. ನಾಲ್ಕು-ನಾಲ್ಕು ಸಂಖ್ಯೆಯು ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮ ಗಳನ್ನು ಸೂಚಿಸುತ್ತದೆ. ಚತುರನೆಂದರೆ ಕುಶಲ, ಜಾಗರೂಕ ಎಂದರ್ಥ. ನಾಲ್ಕು ಪುರು ಷಾರ್ಥಗಳನ್ನು ಎಂದರೆ ಧರ್ಮ, ಅರ್ಥ ಮೊದಲಾದವುಗಳನ್ನು.

೧೨. ನಿದರ್ಶನವೆಂದರೆ ಸಾಕ್ಷಿ. ನಾಲಿಗೆಯು ರಸದಲ್ಲಿ ಚಪ್ಪರಿಸುವ ಪದಾರ್ಥದಲ್ಲಿ ಲಾಲಸನು ಲೋಲುಪನಾಗಿರುತ್ತ ಎಂದರ್ಥ. ತ್ಯಾಗರಾಜಚರಿತ ರಸಾನುಭವದಿಂದಲೇ ತನ್ನ ನಾಲಿಗೆಗೆ ರಸಜ್ಞತ್ವವು (ರಸವನ್ನು ತಿಳಿಯುವ ಶಕ್ತಿಯು) ಸುಲಭವೆಂಬುದು ತಾತ್ಪರ್ಯ.

೧೩. ಗ್ರಂಥಹಾರದಲ್ಲಿ ಎಂದರೆ ಗ್ರಂಥರೂಪವಾದ ಮಾಲೆಯಲ್ಲಿ. ವಿವೇಕಿಗಳು ಗುಣಗ್ರಾಹಿಗಳು ಮತ್ತು ದೋಷಗಳನ್ನು ಬಿಡತಕ್ಕವರು ಎಂದರ್ಥ.

೧೪. ಸಹ್ಯಜಾ ಎಂದರೆ ಸಹ್ಯಪರ್ವತದಿಂದ ಹುಟ್ಟಿದ ಕಾವೇರಿ ನದಿ. ಕ್ಷೀರಂ ಎಂದರೆ ನೀರು. ಅದರಿಂದ ಪಾವನವಾದುದು ಪವಿತ್ರವಾಗಿ ಮಾಡಲ್ಪಟ್ಟಿದ್ದು. ಈ ಶ್ಲೋಕದಿಂದ ಹದಿನಾರನೆಯ ಶ್ಲೋಕದವರೆಗೆ ಏಕವಾಕ್ಯತೆ.

೧೫. ಶರಭೋಜಿ ಮಹಾರಾಜನು ಆಗ ತಂಜಾಪುರ ಅಂದರೆ ತಂಜಾವೂರಿನ ದೊರೆ ಯಾಗಿ ಆ ರಾಜ್ಯವನ್ನು ಆಳಿದನು.

೧೬. ಸೋಪಾನಗಳಂತೆ, ಮೆಟ್ಟಿಲುಗಳಂತೆ ಆದವುಗಳು 'ಸೋಪಾನಾಯಿತಾನಿ' ಎಂದು. ಅಂಥ ಗೋಪುರಗಳು ಯಾವ ದೇಶದಲ್ಲಿರುವುವೋ ಆ ದೇಶ. ದಕ್ಷಿಣಾಪಥಂ ಎಂದರೆ ವಿಂಧ್ಯಪರ್ವತದ ದಕ್ಷಿಣಕ್ಕಿರುವ ಭಾಗ—ದಕ್ಷಿಣ ಭಾರತ.

೧೭. ಉಮಾ ಮತ್ತು ಸ್ಕಂದ. ಪಾರ್ವತಿ ಮತ್ತು ಷಣ್ಮುಖರಿಂದ ಕೂಡಿರುವವನು ಸೋಮಾಸ್ಕಂದನು.

೧೮. ದೀಪಕ ಎಂದರೆ ಪ್ರಖ್ಯಾತಿಗೊಳಿಸುವವನು. ವಿಪಶ್ಚಿದುತ್ತಂಸಃ ಎಂದರೆ ಪಂಡಿತ ಶ್ರೇಷ್ಠನು. ವಾಕ್ ಮತ್ತು ಮನಸ್ಸು ವಾಙ್ಮನಸ್ಸು, ಶುಭ್ರವಾದ ವಾಙ್ಮನಸ್ಸುಳ್ಳವನು.

೨೩. ತ್ರೈಲಿಂಗನೆಂದರೆ ಬ್ರಾಹ್ಮಣ. ಸಾಮಾನ್ಯವಾಗಿ ಈ ಬ್ರಾಹ್ಮಣರು ಆಂಧ್ರಭಾಷೆಯನ್ನು ಮಾತನಾಡುವವರು. ಅವಸತ್ ಎನ್ನುವವರೆಗೆ ಪೂರ್ವಶ್ಲೋಕಗಳಿಗೆ ಏಕವಾಕ್ಯತೆ.

೨೪. ಈಶನಿಗೆ–ಶಂಭುವಿಗೆ ಆವಾಸಯೋಗ್ಯವಾದುದು ಈಶಾವಾಸ್ಯ. ಅಂಥ ಮನಸ್ಸು ಇರುವವನು. ಈ ಕಾರಣಗಳಿಂದ ಗಿರಿರಾಜಕವಿ ಎಂಬ ಹೆಸರಿನ ಸಾರ್ಥಕ್ಯವನ್ನು ಗಳಿಸುತ್ತಾನೆ.

೨೫. ಪೃಥುಮಾನಸಃ ಎಂದರೆ ವಿಶಾಲಹೃದಯ. ನ್ಯಾಯವರ್ತ್ಮಗಃ ಎಂದರೆ ಶಾಸ್ತ್ರದಲ್ಲಿ ಹೇಳಿರುವ ನೀತಿಮಾರ್ಗದಲ್ಲಿ ನಡೆಯುವವನು, ಸದಾಚಾರಸಂಪನ್ನನೆಂದರ್ಥ.

ವಾಗ್ಗೇಯಕಾರಕಃ ಎಂದರೆ ಮಾತನ್ನೂ ಸಂಗೀತವನ್ನೂ ಯಾವನು ರಚಿಸುವನೋ ಅಂಥವನು. ಸಂಗೀತ-ಸಾಹಿತ್ಯ ಎರಡರಲ್ಲೂ ನಿಪುಣನಾದವನನ್ನು ಹಾಗೆ ಕರೆಯುತ್ತಾರೆ.

ಸಂಗೀತರತ್ನಾಕರದಲ್ಲಿ ಹೇಳಿರುವ ಪ್ರಕಾರ—

> ವಾಙ್ಮಾತುರುಚ್ಯತೇ ಗೇಯಂ ಧಾತುರಿತ್ಯಭಿಧೀಯತೇ ।
> ವಾಚಂ ಗೇಯಂ ಚ ಕುರುತೇ ಯಃ ಸ ವಾಗ್ಗೇಯಕಾರಕಃ ॥

(ಅಧ್ಯಾಯ ೩, ಶ್ಲೋ. ೩)

೨೯. ದಿವಾ-ಹಗಲಿನಲ್ಲಿ, ದೋಷಾ-ರಾತ್ರಿಯಲ್ಲಿ, ಪ್ರಾಗೇ-ಬೆಳಗಿನ ಸಮಯದಲ್ಲಿ, ಸಾಯಂ-ಅಪರಾಹ್ಣದಲ್ಲಿ. ಅವೀನಿಷತ್ ಎಂದರೆ ಕಳೆಯಲು ಇಚ್ಛಿಸಿದನು.

೩೦. ಉದ್ದಿಧೀರ್ಷಯಾ ಎಂದರೆ ಎತ್ತಲು ಇಚ್ಛೆಯಿಂದ. ಲೋಚನಗೋಚರ–ಕಣ್ಣಿಗೆ ಕಾಣಿಸುವಂತೆ.

೩೧. ಲೋಕಯಾತ್ರಾ ಎಂದರೆ ಭೂಮಿಯಲ್ಲಿ ಜೀವನ.

೩೨. ಅಪಿತೃಋಣಹಾರಿಣಃ—ಪಿತೃಗಣ ಋಣವನ್ನು ಪರಿಹರಿಸುವವನು ಪಿತೃಋಣಹಾರಿ ; ಹಾಗಲ್ಲದಿರುವವನು ಅಪಿತೃಋಣಹಾರಿ.

೩೪. ದ್ವಿಜಶಾರ್ದೂಲಃ ಎಂದರೆ ದ್ವಿಜಸಿಂಹ, ಬ್ರಾಹ್ಮಣಶ್ರೇಷ್ಠ.

೩೫. ವಧೂರತ್ನದ ಅಂದರೆ ಕನ್ಯಾರತ್ನದ ಜನಕನಾಗಿದ್ದೇನೆ—ತಂದೆಯಾಗಿದ್ದೇನೆ. ನೀನು ಒಂದು ವೇಳೆ ಮಜ್ಜಾಮಾತಾ—ನನ್ನ ಅಳಿಯನಾಗುವೆಯಾದರೆ. ಮಜ್ಜಾ–ಎಂದರೆ ನನ್ನಿಂದ ಜನ್ಮಪಡೆದ ಕನ್ಯೆಯು ಸುಪುತ್ರನ ತಾಯಿಯಾಗುವಿ ಎಂದು ಅನ್ವಯ.

೩೬. ಉಪಯೇಮೇ–ಮದುವೆಯಾದವನು. ವಿಧಾನತಃ–ಶಾಸ್ತ್ರೋಕ್ತಪ್ರಕಾರವಾಗಿ.

೩೭. ಮಂಗಳಕರವಾದ ಶರದೃತುವಿನಲ್ಲಿ ಬಂದು ವಿಷ್ಣುಪದಾಶ್ರಯ ಎಂದರೆ ಆಕಾಶದಲ್ಲಿ ನಿಂತವನಾಗಿ.

ಕುವಲಯೋಲ್ಲಾಸಂ ಎಂದರೆ ಕುಮುದಗಳ ಅರಳುವಿಕೆಯನ್ನು, ಕುರ್ವನ್–ಮಾಡುತ್ತ

ರೇಜೇ—ಶೋಭಿಸಿದನು. ಕೋಃ—ಭೂಮಿಯು, ವಲಯಂ—ಮಂಡಲ. ಅದರ ಉಲ್ಲಾಸಂ—ಸಂತೋಷವನ್ನು. ವಿಷ್ಣುಪದಾಶ್ರಯಃ—ವಿಷ್ಣುವಿನ ಚರಣಾವಲಂಬನೆ ಮಾಡುವವನಾಗಿ. ಹೀಗೆ ಚಂದ್ರನೊಂದಿಗೆ ಶ್ಲೇಷ. ಇಲ್ಲಿ ಋತಾವುಪೇಯಾತ್ ಎಂಬ ನಿಯಮವಿಧಿಯು ಸೂಚಿಸಲ್ಪಡುತ್ತದೆ.

೩೮. ಹೆಸರಿನಿಂದ ಶಾಂತೆಯಾದವಳನ್ನು, ಬರಿಯ ಸ್ವಭಾವಮಾತ್ರದಿಂದಲ್ಲ.

೩೯. ಜಾನಕೀಜಾನಿಂ—ಜಾನಕಿಯ ಪತಿಯನ್ನು, ಶ್ರೀರಾಮನನ್ನು.

೪೦. ಜಾತು—ಹಿಂದೊಮ್ಮೆ. ಸಪ್ತಸ್ಥಾನ ಮಹೋತ್ಸವ ಎಂದರೆ ಪ್ರತಿವರ್ಷವೂ ನಡೆಯುವ ಒಂದು ಉತ್ಸವ. ಈ ಉತ್ಸವದಲ್ಲಿ ಏಳು ಕ್ಷೇತ್ರಗಳಲ್ಲಿ ಇರುವ ದೇವರ ಸಂಚಲನವನ್ನು ಆ ಏಳು ಕ್ಷೇತ್ರಗಳಲ್ಲಿ ನಡೆಸಲಾಗುತ್ತದೆ. ನಂದಿಕೇಶ್ವರನ ವಿವಾಹ ಮಹೋತ್ಸವದ ವೈಭವದಲ್ಲಿ ಆ ಉತ್ಸವಕ್ರಮಗಳನ್ನು ಬಲ್ಲವರು ಇದನ್ನು ಉತ್ತರಾಂಗ ಎಂದು ಹೇಳುವರು.

೪೧. ಸಂಜಿಘೃಕ್ಷಾ—ಸಂಗ್ರಹದ ಕುರಿತಾದ ಇಚ್ಛೆ. ಸಮತ್ಸರಾ—ಇನ್ನೊಬ್ಬರ ಏಳಿಗೆಯಲ್ಲಿ ಅಸಹನೆಯಿಂದ ಕೂಡಿದವನು, ಹೊಟ್ಟೆಉರಿ ಉಳ್ಳವನು.

೪೪. ಅಖರ್ವಃ—ದೀರ್ಘವಾದ ಗರ್ವ ಎಂದರೆ ಅಹಂಕಾರ. ಈ ಅಹಂಕಾರವು ತನ್ನಲ್ಲಿದ್ದು ಬೇರೆಯವರಿಂದ ತಡೆಯಲು ಸಹನೆಯನ್ನು ತೋರಿಸದವನು, ಸ್ವೇಚ್ಛಾಚಾರಿ.

೪೯. ಭೈಕ್ಷವೇ—ಭಿಕ್ಷುವಿಗೆ ಸಂಬಂಧಪಟ್ಟ ಆಶ್ರಮದಲ್ಲಿ ಎಂದು ಇನ್ನೊಂದು ಅರ್ಥ. ಸಾಂಪ್ರತಂ—ಈಗ. ನ ಸಾಂಪ್ರತಂ—ಈಗ ಯೋಗ್ಯವಾಗಿಲ್ಲದಿರುವುದು.

೫೫. ಇಲ್ಲಿ ಒಂದು ಕಥೆಯಿದೆ. ಮನುನೀತಿಯನ್ನು ಬಲ್ಲ ಒಬ್ಬ ಚೋಳರಾಜನು ಒಮ್ಮೆ ತನ್ನ ಮಗನು ಹಸುವಿನ ಕರುವನ್ನು ಕೊಂದುಹಾಕಿದನೆಂಬುದಕ್ಕಾಗಿ ರಥದಿಂದ ತಾನು ಸಾಗುತ್ತಿದ್ದಾಗ ಹಸುವಿನ ಸಂತೋಷಾರ್ಥಕ್ಕಾಗಿ ತನ್ನ ಮಗನನ್ನು ರಥದ ಚಕ್ರದಡಿಗೆ ಬೀಳಿಸಿ ಸಾಯಿಸಿಬಿಟ್ಟನು. ಪಕ್ಷಪಾತವಿಲ್ಲದಿರುವ ಅಂಥ ರಾಜನ ಪ್ರತ್ಯಕ್ಷ ಕುಲದೈವತೆಯೆಂದು ತಾತ್ಪರ್ಯ.

೫೬. ಸಮಯಾಚಾರ್ಯರು ಶೈವಸಿದ್ಧಾಂತವನ್ನು ಪ್ರಚಾರಮಾಡಲು ಅವತಾರ ಮಾಡಿದಂಥ ನಾಲ್ವರು. ಅವರುಗಳೆಂದರೆ (1) ಶ್ರೀಜ್ಞಾನಸಂಬಂಧರ್ (2) ಶ್ರೀವಾಗೀಶ (3) ಶ್ರೀಸುಂದರಮೂರ್ತಿ (4) ಶ್ರೀಮಾಣಿಕ್ಯವಾಚಕರ್ ಎಂಬ ಹೆಸರಿನಿಂದ ಪ್ರಸಿದ್ಧರಾದ ದ್ರಾವಿಡಭಾಷಾ ಕವಿಗಳು.

೫೭. ಶಿವಂ ಎಂದರೆ ಶಂಭುವನ್ನು ಸೇವೆಗೈದು ಎಲ್ಲ ವಿಧವಾದ ಶಿವಂ—ಎಂದರೆ ಮಂಗಳವನ್ನು ಪಡೆದರು ಎಂದರ್ಥ.

೫೯. ಸದಾರಃ—ಪತ್ನಿಯುಕ್ತನಾದವನು.

೬೦. ಸರ್ವದಾ ಉಮಾಧವಃ—ಹೀಗೆಂದರೆ ಸರ್ವದಃ ಮಾಧವಃ ಎಂದು ಪದಚ್ಛೇದ ಮಾಡಿದಾಗ ಈಶ್ವರನೂ, ವಿಷ್ಣುವೂ ಎಂಬರ್ಥ ದೊರಕುವುದು.

೬೧. ತದ್ದಯಾ ಪ್ರಭವಂ—ಆವನ ದಯೆಯಿನಿಮಿತ್ತವಾದ.

೬೩. ತಿರೋಹಿತೇ—ಕಣ್ಣಿಗೆ ಅಗೋಚರನಾಗಿರಲು.

೬೬. ಜಾತಂ—ಮಗನನ್ನು.

೬೮. ಉರುಭವನಾಶಂ—ದೊಡ್ಡದಾದ ಸಂಸಾರದ ಪ್ರಳಯವನ್ನು ಉಂಟುಮಾಡುವ ಭವಂ—ಶಂಕರನನ್ನು. ಭೇಜೇ—ಸೇವೆಗೈದನು.

# ಎರಡನೆಯ ಸರ್ಗ

ರಿಷಭಧ್ವಜಕಾರುಣ್ಯಾತ್ ತನಯರ್ಷಭಲಿಪ್ಸಯಾ ।
ಸಂಪದಾಂ ದಾಯಕಂ ಗೌರ್ಯಾನಾಯಕಂ ಗಾಯಕೋಽಭಜತ್ ॥ ೧ ॥

ಪಯೋವ್ರತಾದಿಕಂ ಧರ್ಮ್ಯಂ ಶುಭಪುತ್ರಪ್ರದಂ ವ್ರತಮ್ ।
ಆಚೇರತುಃ ಸದಾಚಾರೌ ದಂಪತೀ ತೌ ಯತಾತ್ಮಕೌ ॥ ೨ ॥

ರಿಷಭಧ್ವಜನ (ಶಿವನ) ಕರುಣೆಯಿಂದ ಶ್ರೇಷ್ಠಪುತ್ರನನ್ನು ಪಡೆಯುವ ಹಂಬಲದಿಂದ, ಕೇಳಿದ್ದನ್ನು ನೀಡುವ ಗೌರೀಪತಿಯನ್ನು ಈ ಗಾಯಕನು ಭಜಿಸಿದನು.

ಪಯೋವ್ರತಾದಿಗಳನ್ನು ಸುಪುತ್ರಾಪೇಕ್ಷಿಗಳಾಗಿ, ನಿಯಮಬದ್ಧರಾಗಿ, ಶಾಸ್ತ್ರೋಕ್ತ ಪ್ರಕಾರ ಆ ದಂಪತಿಗಳು ಆಚರಿಸಿದರು.

ಬಹುಧಾನ್ಯಾಭಿಧೇ ವರ್ಷೇ, ಮಾಸೇ ವೈಶಾಖನಾಮನಿ ।
ವಲಕ್ಷಪಕ್ಷೇ ಸಪ್ತಮ್ಯಾಂ ಪುಷ್ಯರ್ಕ್ಷೇ ರವಿವಾಸರೇ ॥ ೩ ॥

ಸಾ ಶಾಂತಾ ಸದ್ವ್ರತೈಸ್ಶ್ರಾಂತಾ ಭಾಂತಂ ಪುತ್ರಮಜೀಜನತ್ ।
ಕಲಾನಿಧಿಂ ಯಥಾಪ್ರಾಚೀ ರಕ್ತಂ ಕುವಲಯಪ್ರಿಯಮ್ ॥ ೪ ॥

ಬಹುಧಾನ್ಯ ಸಂವತ್ಸರದ ವೈಶಾಖಮಾಸ ಶುಕ್ಲಪಕ್ಷದ ಸಪ್ತಮೀ ರವಿವಾರ ಪುಷ್ಯ ನಕ್ಷತ್ರದಲ್ಲಿ, ಆ ಪರಿಶ್ರಾಂತಳಾದ, ಶೋಭಾಯಮಾನಳಾದ ಶಾಂತೆಯು ಒಳ್ಳೆಯ ವ್ರತಗಳ ಫಲವಾಗಿ ಸತ್ಪುತ್ರನೊಬ್ಬನನ್ನು ಪಡೆದಳು. ಹೇಗೆ ಕುವಲಯಗಳಿಗೆ ಪೂರ್ವ ದಿಕ್ಕಿನ ಪೂರ್ಣಚಂದ್ರನು ರುಚಿಸುವುದೋ ಹಾಗೆ ಕಲೆಗೆ ಈ ಪುತ್ರನು ನಿಧಿಯಾದನು. ಅರ್ಥಾತ್, ಚಂದ್ರೋದಯದಿಂದ ಕುವಲಯಗಳು ಅರಳಿ ಹೇಗೆ ಮನೋಲ್ಲಾಸ ಉಂಟು ಮಾಡುವುವೋ ಹಾಗೆ, ಈ ಪುತ್ರನು ಜನಿಸಿ ಗಾನಕಲಾಭಿಮಾನಿಗಳಿಗೆ ಮನೋಲ್ಲಾಸ ಉಂಟುಮಾಡಿದನು.

ಶ್ರೀರಾಮಾನುಗ್ರಹೋ ಮೂರ್ತಃ ಕೀರ್ತಿದಾಯ್ಯಾರ್ತಿವಾರಕಃ ।
ಜಜ್ಞೇ ವಿಜ್ಞಾಗ್ರತಸ್ತಸ್ಮಾತ್ ತಸ್ಯಾಂ ನೂನಂ ಶಿಶುಚ್ಛಲಾತ್ ॥ ೫ ॥

ಕ್ವ ಕ್ವೇತಿ ರೋದನಂ ರಾಮಸಾಕ್ಷಾತ್ಕಾರಾಭಿಲಾಷಿಣಃ ।
ಶಿಶೋಸ್ತಸ್ಯಾವಗತ್ಯಾಽಮೂ ದಂಪತೀ ಆನನಂದತುಃ ॥ ೬ ॥

ಸತ್ಸಂಗೀತಕಲೋದ್ಧಾರ ಕ್ಷುದ್ರಾರ್ಥತ್ಯಾಗಯೋರ್ದ್ವಯೋಃ ।
ಆಮುಷ್ಯ ಬದ್ಧದೀಕ್ಷತ್ವಂ ಮುಷ್ಟಿಬಂಧದ್ವಯಾನ್ವಿತಮ್ ॥ ೭ ॥

ಅವನು ಶ್ರೀರಾಮನ ಅನುಗ್ರಹದಿಂದ ದೇಹಧಾರಿಯಾದ, ಶೋಕವನ್ನು ಹರಿಸಿ ಕೀರ್ತಿಪ್ರದಾಯಕನಾದ ಪುತ್ರನಾಗಿದ್ದನು. ಸತ್ಪುತ್ರನನ್ನೇ ಪಡೆಯಬೇಕೆಂಬ ಉತ್ಕಟೇಚ್ಛೆಯ ಫಲವಾಗಿ ನಿಶ್ಚಯವಾಗಿಯೂ ಮುಂದೆ ವಿಶೇಷಜ್ಞಾನಿಯಾದನು. ರಾಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಅಭಿಲಾಷೆಯನ್ನು ಹೊಂದಿ ಇವರು ಮಗುವಿನ ಅಳುವಿನ ಧ್ವನಿಯನ್ನು ಕೇಳಿ, ಅವನ ಸಾಕ್ಷಾತ್ಕಾರವಾಯಿತೆಂಬ ಭಾವನೆಯಿಂದ ಆನಂದಭರಿತರಾದರು. ಒಳ್ಳೆಯ ಸಂಗೀತ ಕಲೋದ್ಧಾರ ಹಾಗೂ ಕ್ಷುದ್ರವಾದ ಐಹಿಕ ಸುಖತ್ಯಾಗ, ಇವುಗಳೆರಡನ್ನೂ ಎರಡು ಮುಷ್ಟಿಗಳಲ್ಲಿ ಹಿಡಿದು ಬದ್ಧದೀಕ್ಷೆಯನ್ನು ಪಡೆದಂತೆ ಆ ಶಿಶುವು ಕಾಣುತ್ತಿದ್ದನು.

ಜಾತಕರ್ಮಾದಿಭಿಃ ಪೂತಂ ತ್ಯಾಗರಾಜದಯೋದ್ಭವಮ್ ।
ಜಾತರೂಪಹಸದ್ರೂಪಂ ತ್ಯಾಗರಾಜಂ ತಮಾಹ್ವಯತ್ ॥ ೮ ॥

ಪ್ರಾಂಗಣೇ ರಿಂಗಣಂ ಕುರ್ವನ್ನರ್ಭಕೈಃ ಸಹ ಸೋಽರ್ಭಕಃ ।
ಭಾವಿನೀಂ ಭುವನವ್ಯಾಪ್ತಾಂ ಸ್ವಯಾತ್ರಾಂ ಸಮಸೂಚಯತ್ ॥ ೯ ॥

ಕಲ್ಯಾಣ್ಯಾಽಮೃತವರ್ಷಿಣ್ಯಾ ಶ್ರೀರಾಗವಿಜಯಾಢ್ಯಯಾ ।
ಕಾಮೋದರ್ಯಾ ಗಿರಾ ಚಕ್ರೇ ಶಿಶುಃ ಸಾರಂಗಮೋಹನಮ್ ॥ ೧೦ ॥

ನಾಯಕೀಕೃತಭೂಪಾಲಃ ಶ್ರೀರಂಜಿನ್ಯಾ ತ್ವಿಷಾಯುತಃ ।
ಷಣ್ಮುಖಪ್ರಿಯ ಚರ್ಯೋಽರ್ಯಂ ಧನ್ಯಾಸೀ ಮುಕಲೋಽಲಸತ್ ॥ ೧೧ ॥

ವಸಂತಂ ಮೇಘರಂಜಿನ್ಯಾ ರವಿಚಂದ್ರಿಕಯಾದ್ಭುತಮ್ ।
ಭಾಸಯನ್ ಸಹನಾತ್ ಕಾಮಮುಖಾರೀನ್ ಸಾಮತೋಽಜಿಯತ್॥ ೧೨ ॥

ಏವಂ ವಿಧೈರ್ನಿಜೈರ್ಭದ್ರೈರ್ಬಹುಚಿತ್ರ ವಿಚಿತ್ರಿತೈಃ ।
ಕ್ರೀಡನ್ನೈಃ ಪಿತರೌ ಸಂತೌ ನಂದನೋಽಯಮನಂದಯತ್ ॥ ೧೩ ॥

ದ್ರಾವಿಡ್ಯಾ ದೇಶವಾಚಾಸಾವಾಂಧ್ರ್ಯಾ ಚ ಕುಲಭಾಷಯಾ ।
ಗೈರ್ವಾಣ್ಯಾ ಶಾಸ್ತ್ರವಾಚಾಽಪಿ ಮಧುರಾಲಾಪ ಕೃದ್ ಬಭೌ ॥ ೧೪ ॥

ತ್ಯಾಗರಾಜಸ್ವಾಮಿಯ ದಯೆಯಿಂದ ಉದ್ಭವಿಸಿದ ಈ ಶಿಶುವಿಗೆ ಜಾತಕರ್ಮಾದಿಗಳನ್ನು ಮಾಡಿ ಜಾತತದ್ರೂಪವಾದ ತ್ಯಾಗರಾಜನೆಂಬ ಹೆಸರಿನಿಂದ ಇವನನ್ನು ಕರೆದರು.

ಅಂಗಳದಲ್ಲಿ ಮಂಡಿಗಾಲೂರಿ ನಡೆದು, ಮಕ್ಕಳೊಡನೆ ಕೂಡಿ ಆಡಿದ ಈ ಶಿಶುವು ಮುಂದೆ ಭೂಲೋಕವನ್ನೆಲ್ಲಾ ವ್ಯಾಪಿಸುವ ತನ್ನ ಯಾತ್ರೆಯನ್ನು ನಡೆನುಡಿಗಳ ಮೂಲಕ ಸೂಚಿಸುವಂತಿತ್ತು.

ಕಲ್ಯಾಣಿ ಮುಂತಾದ ರಾಗಗಳ ಸುರಿಮಳೆಯಿಂದ ಸಾರಂಗವೇ ಮೊದಲಾದ ಪಶು

ದಿಂದ ಕೂಡಿದವನಾಗಿದ್ದನು ಹಾಗೂ ಈತನು ಷಣ್ಮುಖಪ್ರಿಯ ಜರ್ಯೆಯಂತೆ ಧನ್ಯಾಸೀ ರಾಗದೊಡಗೂಡಿ ಪ್ರಕಾಶಿಸುತ್ತಿದ್ದನು.

ಮೇಘರಾಶಿಯಿಂದ ರಂಜಿಸುವ ವಸಂತ, ಬೆಳದಿಂಗಳಿಂದ ರಂಜಿಸುವ ಮೇಘಗಳು ಹಾಗೂ ಈ ರಂಜನೆಗಳಿಂದ ರವಿಯು ಕಾಣದಿರುವಿಕೆಯು ಹೇಗೋ ಹಾಗೆ ವಸಂತಾದಿ ರಾಗಗಳಿಂದ, ಸಹನಶೀಲತೆಯಿಂದ, ಕಾಮೋಲ್ಲಾಸಗಳಿಂದ ಕೂಡಿದ ಶತ್ರುಗಳನ್ನು ಈತನು ಸಾಮದಿಂದಲೇ ಜಯಿಸಿದನು.

ಈ ರೀತಿಯಾದ ತನ್ನ ನೈಜಸ್ವಭಾವ ಹಾಗೂ ಗುಣಗಳಿಂದ ಶಾಸ್ತ್ರಕೋವಿದರಾದ ತಂದೆತಾಯಿಯರನ್ನು ತನ್ನ ವಿಚಿತ್ರವಾದ ಆಟಗಳಿಂದ ರಂಜಿಸಿದನು.

ದೇಶಭಾಷೆಯಾದ ತಮಿಳನ್ನೂ, ತನ್ನ ಕುಲಭಾಷೆಯಾದ ತೆಲುಗನ್ನೂ, ಹಾಗೂ ಶಾಸ್ತ್ರಭಾಷೆಯಾದ ಸಂಸ್ಕೃತವನ್ನೂ ತ್ಯಾಗರಾಜನು ಕರತಲಾಮಲಕವನ್ನಾಗಿ ಮಾಡಿ ಕೊಂಡನು.

ಕಾಲೇನ ಗಚ್ಛತಾ ಸೋಽಯಮಥ ದಾರಿದ್ರ್ಯಪೀಡಿತಃ ।
ರಾಮಬ್ರಹ್ಮಾ ಮನಶ್ಚಕ್ರೇ ಗಂತುಂ ಪಂಚನದಂ ಪುರಂ ॥ ೧೫ ॥

ತಾದೃಕ್ಷಮಹಿಮೋಲ್ಲಾಸಿಸುತಾಯ ತ್ವಭ್ಯಸೂಯಂವಃ ।
ಕೇಚಿನ್ಮಂದ ಧಿಯೋಽಭೂವನ್ ಕ್ಷುದ್ರೋಪದ್ರವಕಾರಿಣಃ ॥ ೧೬ ॥

ತಾನ್ ಪರಿತ್ಯಜ್ಯ ದೂರೇಣ ದುರಾಚಾರೆನ್ ಸ ಸಾತ್ವಿಕಃ ।
ತತ್ಯಾಜ ತ್ಯಾಗರಾಜಸ್ಯ ಪುರಮೇತತ್ ಕಥಂಚನ ॥ ೧೭ ॥

ಹೀಗೆ ಕಾಲ ಕಳೆಯುತ್ತಿರಲು, ದಾರಿದ್ರ್ಯದಿಂದ ನೊಂದವನಾಗಿ, ರಾಮಬ್ರಹ್ಮನು ಪಂಚನದಪುರಕ್ಕೆ ಹೋಗಲು ನಿಶ್ಚಯಿಸಿದನು.

ಆ ರೀತಿಯ ಮಹಿಮೆಗಳಿಂದ ಕೂಡಿದ ಪುತ್ರನನ್ನು ಪಡೆದಿದ್ದರೂ ಸಹ ಹಸಿವು ಬಡತನಗಳಿಂದ ಉಪದ್ರವಪೀಡಿತನಾಗಿ ಮಂದಬುದ್ಧಿಯುವನಂತೆ ಆದನು.

ಆ ಸಾತ್ವಿಕನು ಕೆಟ್ಟ ನಡತೆಗಳನ್ನು ತ್ಯಜಿಸಿದ್ದರಿಂದ ಹೇಗೋ ಬಹಳ ಕಷ್ಟಪಟ್ಟು ಆ ಊರನ್ನು ಬಿಡಲು ಇಷ್ಟವಿಲ್ಲದಿದ್ದರೂ ಬಿಟ್ಟನು.

ಅಥ ಸಂಚಿತ ಪುಣ್ಯಾನಾಂ ಮಂಜುವಾಸವಿಜೃಂಭಿತಮ್ ।
ಅವಂಚಕಜನೈಃಪೂರ್ಣಂ ಕ್ಷೇತ್ರಂ ಪಂಚನದಾಭಿಧಮ್ ॥ ೧೮ ॥

ಕಾವೇರ್ಯಭಂಗುರೋತ್ತುಂಗ ತರಂಗಾಸಂಗಿಮಂಗಲಮ್ ।
ಅಸಂಗಿಪುಂಗವಾತಂಕಭಂಗ ಸಂಘಟನಾಂಕಿತಮ್ ॥ ೧೯ ॥

ಧರ್ಮಸಂವರ್ಧನೀಶ್ಲಿಷ್ಟ ಪ್ರಣತಾರ್ತಿಹರಪ್ರಿಯಮ್ ।
ವಾಗೀಶಮುನಿ ಸದೃಷ್ಟ ಕೈಲಾಸಗಿರಿವೈಭವಮ್ ॥ ೨೦ ॥

ಸಂಚಿತ ಪುಣ್ಯಫಲಗಳಿಂದಾಗಿ ಸುಂದರವಾದ ಮನೆಗಳಿಂದ ವಿಜೃಂಭಿತವಾದ, ವಂಚಕ ಜನರೇ ಇಲ್ಲದಿರುವ ದಿವ್ಯವಾದ ಕ್ಷೇತ್ರವು ಪಂಚನದ ಎಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಕಾವೇರಿಯು ಎದ್ದು ಬೀಳುವ ಅಲೆಗಳ ಸಂಬಂಧ ಪಡೆದಿರುವ ಹಾಗೂ ವಿರಕ್ತ ಜನರಿಗೆ ಆತಂಕವನ್ನೊಡ್ಡದೆ ಇರುವ ಜನರಿಂದ ಕೂಡಿದ ಕ್ಷೇತ್ರವಾಗಿದೆ. ಈ ಕ್ಷೇತ್ರವು ಧರ್ಮಸಂವರ್ಧಿನೀ (ಪಾರ್ವತಿ) ಹಾಗೂ ಪ್ರಣತಾರ್ಥಿಹರ(ಶಿವ)ನಿಗೆ ಅತ್ಯಂತ ಇಷ್ಟವಾದುದು. ಏಕೆಂದರೆ ದಕ್ಷಿಣ ಕೈಲಾಸವೆಂಬ ಈ ಊರು ವಾಗೀಶ ಮುನಿಯಿಂದ ಅನುಗ್ರಹೀತವಾಗಿದೆ. (ವಾಗೀಶ ಮುನಿಯ ಪ್ರಾರ್ಥನಾನುಸಾರ ಶಿವನು ಇಲ್ಲಿಯೇ ಒಂದು ಪವಿತ್ರವಾದ ಸರಸ್ಸಿನಲ್ಲಿ ಸ್ನಾನಮಾಡಿ ತನ್ನ ಕೈಲಾಸಗಿರಿಯ ದರ್ಶನವನ್ನು ಇಲ್ಲಿಯೇ ಆ ಮುನಿಗೆ ಇತ್ತನು. ಆದುದರಿಂದಲೇ ಇದು ದಕ್ಷಿಣ ಕೈಲಾಸ.)

ಶರಭೋಜಿಮಹಾರಾಜಸ್ಥಾಪಿತೋಚ್ಚ ಶಿವಾಲಯಮ್ ।
ಗೈರ್ವಾಣೀದ್ರಾವಿಡೀಭಾಷಾ ಕಲಾಶಾಲವಿಲಾಸಿತಮ್ ॥ ೨೧ ॥

ಯತ್ರೌವತಶ್ರುತಿಸಂವೃದ್ಧಿಪರಾ ವಿದ್ಯಾವಿಕಾಸಿನೀಃ ।
ವಿದ್ಯಾರತ್ನವತಂಸಾಸ್ತಾಃ ಶುಭಾಃ ಪರಿಷದೋ ದಧತ್ ॥ ೨೨ ॥

ಘನಪಾರಿಸದೋವಂಶಮುಕ್ತಾಮಣಿ ವಿಭೂಷಿತಮ್ ।
ಶಾಸ್ತ್ರರತ್ನಾಕರಪ್ರೋಥ್ಯವಾದವಾತ ನಿಷೇವಿತಮ್ ॥ ೨೩ ॥

ಪಂಡಿತೈರ್ಮಂಡಿತಕ್ಷೋಣೀ ಮಂಡಲೈಃ ಖಂಡಿತಭ್ರಮೈಃ ।
ಉದ್ದಂಡವಾದಶೂರೈಸ್ತೈರಾಢ್ಯಂ ನ್ಯಾಯವಿಶಾರದೈಃ । ॥ ೨೪ ॥

ವಾಗ್ಗೇಯಕಾರಕೈರ್ನಿತ್ಯಂ ಭ್ರಾಜದ್ಧರಿಕಥೋತ್ಸವೈಃ ।
ಸತ್ಸಂಗೀತರಸಾಭಿಜ್ಞೈರ್ಗಾಯಕರತ್ನೈರ್ವಿರಾಜಿತಮ್ ॥ ೨೫ ॥

ಸೌಭಾಗ್ಯವಿಜಿತಸ್ವರ್ಗಂ ವೈಕುಂಠಜಯಿವೈಭವಮ್ ।
ಕೈಲಾಸಹಾಸಿಭಕ್ತಾಢ್ಯಮಕುತೋಭಯ ಜಂತುಕಮ್ ॥ ೨೬ ॥

ಜಗಾಮಪಾವನೇ ತಸ್ಮಿನ್ ಸಸ್ನೌ ಸಹ್ಯಸುತಾಮೃತೇ
ಪ್ರಣತಾರ್ತಿಹರಂ ಶಂಭುಂ ದದರ್ಶಾತ್ರ ಸುದರ್ಶನಮ್ ॥ ೨೭ ॥

ಕವೇರತನಯಾಸ್ನಾತಾತ್ ಕವೇರತನುಚೇತಸಃ ।
ತಸ್ಯಾಸೀದ್ ದೃಢಸಂಕಲ್ಪಸ್ತತ್ರೈವಾವಸ್ತುಮಾ ಮೃತೇಃ ॥ ೨೮ ॥

ತತೋಽಯಂ ಪರಿಪೂತಾತ್ಮಾ ಸತ್ಯಾ ಪತ್ನ್ಯಾ ಸುಪುತ್ರಯಾ ।
ಏತತ್ ಪಂಚನದಕ್ಷೇತ್ರಮಧ್ಯುವಾಸ ಸ ಭೂಸುರಃ ॥ ೨೯ ॥

ಶರಭೋಜ ಮಹಾರಾಜನಿಂದ ಇಲ್ಲಿ ಒಂದು ದೊಡ್ಡ ಶಿವಾಲಯವು ಸ್ಥಾಪಿಸಲ್ಪಟ್ಟಿದೆ. ಈ ಕ್ಷೇತ್ರವು ಸಂಸ್ಕೃತ, ತಮಿಳು ಹಾಗೂ ಕಲಾ ಶಾಲೆಗಳಿಂದ ಶೋಭಿಸುತ್ತಿತ್ತು, ಇಲ್ಲಿ

ಯುವಜನ ಸಂವರ್ಧಿನೀ, ವಿದ್ಯಾವಿಕಾಸಿನೀ ಎಂಬ ಒಳ್ಳೆಯ ವಿದ್ವನ್ಮಣಿಗಳಿಂದ ಕೂಡಿದ ಪರಿಷತ್ತುಗಳಿದ್ದುವು. ಘನಪಾಠಿ ಮುಕ್ತಾಮಣಿ, ಶಾಸ್ತ್ರರತ್ನಾಕರ ಇತ್ಯಾದಿ ಬಿರುದು ಗಳನ್ನು ಪಡೆದಿದ್ದ ಪಂಡಿತೋತ್ತಮರಿಂದ ಈ ಕ್ಷೇತ್ರವು ಶೋಭಿಸುತ್ತಿತ್ತು. ಇಲ್ಲಿ ಪಂಡಿತರ ಮಂಡನ ಖಂಡನಗಳು ಹಾಗೂ ವಾಕ್ಯಾರ್ಥಗಳು, ನ್ಯಾಯವಿಶಾರದರಿಂದ ಅತಿ ಉನ್ನತ ಮಟ್ಟದ ವಾದಗಳು ನಡೆಯುತ್ತಿದ್ದುವು. ಪ್ರತಿನಿತ್ಯವೂ ಉತ್ಸವಗಳಲ್ಲಿ, ಹರಿಕಥೆ, ವಾಗ್ಗೇಯಕಾರರಿಂದ ಹಾಗೂ ಗಾಯಕರತ್ನ ಎಂಬ ಬಿರುದಾಂಕಿತ ಸಂಗೀತ ಕಲಾರತ್ನರುಗಳಿಂದ ಸಂಗೀತರಸದೌತಣವು ನಡೆಯುತ್ತಿದ್ದುವು.

ಸ್ವರ್ಗವನ್ನೂ ಮೀರಿಸಿದ ಸೌಭಾಗ್ಯಗಳು, ವೈಕುಂಠವನ್ನು ಮೀರಿಸಿದ ವೈಭವ, ಕೈಲಾಸದಲ್ಲಿನ ಭಕ್ತರಿಗಿಂತ ಉತ್ತಮ ಭಕ್ತರನ್ನು ಹೊಂದಿದ್ದ ಈ ಕ್ಷೇತ್ರದಲ್ಲಿ ಭಯಕ್ಕೆ ಕಾರಣವಾದರೂ ಎಲ್ಲಿಂದ ಬರಬೇಕು ?

ಈ ರೀತಿಯಾದ ಪವಿತ್ರವಾದ ಕಾವೇರಿ ನದಿಯ ಬಳಿಯಿರುವ ಕ್ಷೇತ್ರಕ್ಕೆ ರಾಮ ಬ್ರಹ್ಮನು ಬಂದನು. ಅಲ್ಲಿ ಎಲ್ಲಾ ಪಾಪಗಳನ್ನು ಪರಿಹರಿಸುವ ಶಂಭುವಿನ ಸಂದರ್ಶನ ಪಡೆದನು. ಇಲ್ಲಿಯ ಕಾವೇರಿಯಲ್ಲಿ ಸ್ನಾನಮಾಡಿ ಕಾವೇರಿಯ ವಿಶಾಲ ಮನಸ್ಸನ್ನು ಪಡೆದವನಾಗಿ, ದೃಢಸಂಕಲ್ಪಚಿತ್ತನಾಗಿ ಕುಟೀರವೊಂದನ್ನು ನಿರ್ಮಿಸಿಕೊಂಡು ವಾಸ ಮಾಡುತ್ತಾ ಪುನೀತನಾದ ಈ ಬ್ರಾಹ್ಮಣಶ್ರೇಷ್ಠನು ಪತ್ನೀಪುತ್ರರೊಡನೆ ಈ ಪಂಚನದ ಕ್ಷೇತ್ರದಲ್ಲಿ ಸತ್ಯವ್ರತನಾಗಿ ಬಾಳುತ್ತಿದ್ದನು.

ಅಷ್ಟವರ್ಷಂ ಕನಿಷ್ಠಂ ತಮುಪನೀಯ ಸುತಂ ಸುಧೀಃ ।
ಶ್ರೋತ್ರಿಯಾಗ್ರ್ಯಪದಾಂಭೋಜೇಽಧ್ಯಯನಾರ್ಥಮಥಾರ್ಪಯತ್ ॥ ೩೦ ॥

ಸಕೃದುಚ್ಚರಿತಂ ಶಬ್ದಂ ಸಕೃದಾಕರ್ಣ್ಯ ತತ್ಕ್ಷಣಾತ್ ।
ತದೂರ್ಧ್ವಮಪಿ ವಕ್ತಾರಂ ಕೋಬಾಽಧ್ಯಾಪಯಿತಾ ತದಾ ॥ ೩೧ ॥

ಅನುಕ್ತಾರ್ಥಸ್ಯ ಶಬ್ದಸ್ಯ ಬಹ್ವರ್ಥಾನ್ ಶಾಸ್ತ್ರಸಂಗತಾನ್।
ಪ್ರಶಂಸನ್ ಪ್ರತಿಭಾಶಾಲೀ ಗುಣವಾನ್ ಸ್ವಯಮಾಬಭೌ ॥ ೩೨ ॥

ಇತ್ಥಂ ಭೂತಸ್ಯ ಪುತ್ರಸ್ಯ ಬ್ರಹ್ಮವರ್ಚಸಶಾಲಿನಃ ।
ಮೂರ್ತಿರಲ್ಪಾಪಿ ತತ್ಕೀರ್ತಿಸ್ತ್ರಿಲೋಕೀಂ ವ್ಯಾನಶೇ ಕ್ಷಣಾತ್ ॥ ೩೩ ॥

ಎರಡನೆಯ ಮಗನಾದ ತ್ಯಾಗರಾಜನಿಗೆ ಎಂಟು ವರ್ಷಗಳು ತುಂಬಲು, ಬುದ್ಧಿವಂತ ನಾದ ಅವನಿಗೆ ಉಪನಯನವನ್ನು ಮಾಡಿ, ವಿದ್ಯಾರ್ಜನೆಗಾಗಿ ಶ್ರೋತ್ರಿಯರ ಪಾದ ಕಮಲಗಳಿಗೆ ಅವನನ್ನು ಅರ್ಪಿಸಿದನು.

ಒಂದು ಸಾರಿ ಹೇಳಿದ ಶಬ್ದವನ್ನು ಕೇಳಿದಮಾತ್ರಕ್ಕೆ ತತ್‌ಕ್ಷಣವೇ ಪುನಃ ಹೇಳುವ ಹಾಗೂ ಅದರ ನಂತರ ಬರುವುದನ್ನೂ ತಿಳಿಸುವ ಬುದ್ಧಿವಂತರಿಗೆ ಯಾರು ತಾನೇ ಪಾಠ ಹೇಳಿಕೊಡಲು ಸಾಧ್ಯ !

ಶಬ್ದಗಳಿಗೆ ಅರ್ಥವನ್ನು ಹೇಳದಿದ್ದರೂ, ಶಾಸ್ತ್ರಸಮ್ಮತವಾದ ಅನೇಕ ಅರ್ಥಗಳನ್ನು

ಕೊಡುವ ಪ್ರತಿಭಾಶಾಲಿಯಾದ ಮತ್ತು ಗುಣಶಾಲಿಯಾದ ಈತನು ತನ್ನ ಸ್ವಂತ ಸಾಮರ್ಥ್ಯದಿಂದಲೇ ಪ್ರಶಂಸೆಗೆ ಒಳಗಾದನು.

ಬ್ರಹ್ಮವರ್ಚಸ್ಸಿನಿಂದ ಕೂಡಿರುವ ಈ ಪುತ್ರನು ಅತಿ ಚಿಕ್ಕವನಾದರೂ ಅವನ ಕೀರ್ತಿಯು ಆ ಕ್ಷಣದಿಂದಲೇ ಎಲ್ಲೆಲ್ಲೂ ವ್ಯಾಪಿಸಿತು.

ತಂಜಾಪುರ ನರಾಧೀಶಃ ಷಾಜಿರಾಜಃ ಸುಧಾರ್ಮಿಕಃ ।
ತಂ ದೃಷ್ಟ್ವಾ ಧನ್ಯಜನ್ಮಾನಂ ನಿಜಂ ಜನ್ಮಾಪ್ಯಭಾವಯತ್ ॥ ೩೪ ॥

ತಂ ವಿಪ್ರಮುಂಛವೃತ್ತ್ಯೈವ ದೇಹಯಾತ್ರಾ ವಿಧಾಯಿನಮ್ ।
ಕಥಂಚಿದ್ ಗ್ರಾಹಯಾಮಾಸ ಗೃಹಮೇಕಂ ಮಹೀಪತಿಃ ॥ ೩೫ ॥

ತದೈವ ನಿಃಸ್ಪೃಹೋ ವಿಪ್ರಸ್ತದ್ಗೇಹಂ ಸ ಉದಾರಧೀಃ ।
ಅಕಿಂಚನಾಯ ವಿಪ್ರಾಯ ಶುಭ್ರಾಯ ಪ್ರದದೌ ಮುದಾ ॥ ೩೬ ॥

ಶ್ರೀಮಂಜನಾಖ್ಯ ವೀಥ್ಯಂತೇ ಗೃಹೇ ಪಿತ್ರಾರ್ಜಿತೇ ಮಿತೇ ।
ಉಪಾಸ ವಾಸವಾದೀಡ್ಯ ಸುತರತ್ನ ಸಮನ್ವಿತಃ ॥ ೩೭ ॥

ಆಗ ತಂಜಾವೂರಿನ ದೊರೆಯಾದ, ಧಾರ್ಮಿಕನಾದ ಷಾಜಿರಾಜನು ಇದನ್ನು ನೋಡಿ ಆ ನಾಡಿನಲ್ಲಿ ತನ್ನ ಜನ್ಮವು ಸಾರ್ಥಕವಾಯಿತೆಂದು ಭಾವಿಸಿದನು.

ಭಿಕ್ಷಾಟನೆಯಿಂದ ತನ್ನ ಸಂಸಾರವನ್ನು ನಿರ್ವಹಣೆ ಮಾಡುತ್ತಿದ್ದ ರಾಮಬ್ರಹ್ಮನನ್ನು ಹೇಗೋ ಮನೆಯೊಂದಕ್ಕೆ ಕಷ್ಟಪಟ್ಟು ಕರೆತಂದನು. ಉದಾರಿಯಾದ ನಿಸ್ಪೃಹನಾದ ಆ ಬ್ರಾಹ್ಮಣನಿಗೆ ಸಂತೋಷದಿಂದ ಆ ಮನೆಯನ್ನು ದಾನವಾಗಿ ಕೊಟ್ಟನು. ಶ್ರೀಮಂಜನ ಎಂಬ ಹೆಸರಿನ ಬೀದಿಯಲ್ಲಿರುವ ಆ ಸಣ್ಣ ಮನೆಯಲ್ಲಿ ಇಂದ್ರಾದಿ ದೇವತೆಗಳೋಪಾದಿಯಲ್ಲಿ ಸುತರತ್ನರೊಂದಿಗೆ ರಾಮಬ್ರಹ್ಮನು ವಾಸಿಸುತ್ತಿದ್ದನು.

ಜ್ಯೇಷ್ಠಸ್ಯ ಜನ್ಮಮಾತ್ರೇಣ ಗರಿಷ್ಠಸ್ಯ ಚ ಗರ್ವತಃ ।
ದುಷ್ಟಭೂಯಿಷ್ಠ ನಿಷ್ಠಸ್ಯ ಜಪ್ಯೇಶಸ್ಯ ಮನಸ್ಯಭೂತ್ ॥ ೩೮ ॥

"ಪಾಶ್ಚಾತ್ಯಜನದುರ್ನೀತ ಪರಿಷ್ಕಾರ ವಿಷೋಲ್ಬಣೇ ।
ನ ಕಲೌ ಪ್ರಾಚ್ಯಪದ್ಧತ್ಯಾ ವೈದಿಕ್ಯಾ ಸುಖಮಶ್ನುಹೇ ॥ ೩೯ ॥

ಶರಣೀಕರಣೀಯಾ ಮೇ ಧರಣೀಧರನಾಯಕಾಃ ।
ನ ಶಾಸ್ತ್ರಂ ನಾಪಿ ದೇವೋ ಮೇ ಸುಖದಾತಾ ಪ್ರದೃಶ್ಯತೇ ॥ ೪೦ ॥

ಅತೋಽಹಂ ಪೂರ್ವಿಕಾಚಾರಾತ್ ಶ್ರೌತಸ್ಮಾರ್ತ ಕ್ರಿಯಾಕುಲಾನ್ ।
ಉಜ್ಝಿತ್ವಾ ಲೌಕಿಕಾಚಾರೈರ್ಭವೇಯಂ ಧನಸಂಗ್ರಹೀ ॥ ೪೧ ॥

ನ ಭಕ್ತ್ಯಾ ಪೂರ್ಯತೇ ಕುಕ್ಷಿಃ ನ ಶಾಸ್ತ್ರೈಶ್ಛಾದ್ಯತೇ ವಪುಃ ।
ನ ಗೀತೈಃ ಪ್ರೀಯತೇ ಭಾರ್ಯಾ ಸರ್ವೋ ದ್ರವ್ಯೈಕಸಂಗ್ರಹಃ ॥ ೪೨ ॥

ದ್ರವ್ಯೇಣ ಪ್ರಾಪ್ಯತೇ ವಿದ್ಯಾ ಸಭ್ಯತಾ ಗುರುತಾ ತಥಾ ।
ಲೋಕೈಕ ಪೂಜ್ಯತಾ ಚಾಂತೇ ಮುಕ್ತತಾಪಿ ಧನಾದ್ ಭವೇತ್ ॥ ೪೩ ॥

ವೇದೇಷು ಸರ್ವಶಾಸ್ತ್ರೇಷು ನಿಪುಣೋಽಪಿ ವಿವೇಕ ದೃಕ್ ।
ನಟೋ ಭಟೋಽಪಿ ವಾ ಭೂತ್ವಾ ದ್ರವ್ಯಮೇವ ಸಮಾರ್ಜಯೇತ್'' ॥ ೪೪ ॥

ಇತಿ ಸ್ವಬುದ್ಧಿಮಾತ್ರೋತ್ಥ ವಿಮರ್ಶಜನಿತಭ್ರಮಃ ।
ಸ್ವಗುಣಾನುಗುಣಾಂ ಕನ್ಯಾಂ ಪರಿಜಗ್ರಾಹ ಸಾರ್ಥಿಕಾಮ್ ॥ ೪೫ ॥

ಶ್ರೀರಾಮಭಜನಾಸಕ್ತಂ ದ್ರವ್ಯಾರ್ಜನ ಪರಾಙ್ಮುಖಮ್ ।
ಆಢ್ಯಂ ತೃಣಾಯ ಮನ್ವಾನಂ ತಾತಂ ಪರಿಜಹಾಸ ಸಃ ॥ ೪೬ ॥

ರಾಮಬ್ರಹ್ಮನ ಹಿರಿಯ ಮಗನಾದರೋ ತಾನು ಜನ್ಮಮಾತ್ರದಿಂದಲೇ ಶ್ರೇಷ್ಠ ಎಂಬುದಾಗಿ ಭಾವಿಸಿ, ಗರ್ವಿಷ್ಠನಾಗಿ ದುಷ್ಟಬುದ್ಧಿಯನ್ನು ಹೆಚ್ಚಾಗಿ ತನ್ನ ಮನಸ್ಸಿನಲ್ಲಿ ತುಂಬಿಕೊಂಡವನಾದನು. ಬೇರೆ ಜನರ ಕೆಟ್ಟ ನಡವಳಿಕೆ ಮತ್ತು ಮಾತುಗಳಿಂದ ಕೆಟ್ಟ ತನವು ವಿಷದಂತೆ ಅವನಲ್ಲಿ ಹೆಚ್ಚಾಯಿತು. ಪ್ರಾಚೀನ ಪದ್ಧತಿಯಾದ ತನ್ನ ವೈದಿಕ ಧರ್ಮ ಹಾಗೂ ಕಲೆಗಳಲ್ಲಿ ಉದಾಸೀನನಾಗಿ ಸುಖಲೋಲುಪನಾದನು.

''ನನಗೆ ಈ ದೊರೆಗಳೂ ಸಹ ಶರಣಾಗತರಾಗಬೇಕು. ಶಾಸ್ತ್ರಗಳಾಗಲೀ, ದೇವ ರಾಗಲೀ ಸುಖವನ್ನು ಎಂದಿಗೂ ನೀಡುವುದಿಲ್ಲ. ಆದುದರಿಂದ ಜ್ಯೇಷ್ಠಪುತ್ರನಾದ ನಾನು ನನ್ನ ಪೂರ್ವಾಚಾರ್ಯರುಗಳ ಶ್ರೌತಸ್ಮಾರ್ತ ಕ್ರಿಯೆಗಳನ್ನು ತ್ಯಜಿಸಿ ಲೌಕಿಕವಾಗಿ ಧನಸಂಗ್ರಹ ಮಾಡುವೆನು.

ಭಕ್ತಿಯಿಂದ ಹೊಟ್ಟೆ ತುಂಬುವುದಿಲ್ಲ. ಶಾಸ್ತ್ರಗಳಿಂದ ದೇಹವು ಮುಚ್ಚಲ್ಪಡುವುದಿಲ್ಲ. ಹಾಡುಗಳಿಂದ ಹೆಂಡತಿಯು ಸಂತೋಷಗೊಳ್ಳುವುದಿಲ್ಲ. ಈ ಪ್ರಪಂಚದಲ್ಲಿ ಎಲ್ಲರೂ ಹಣ ಒಂದನ್ನೇ ಗಳಿಸಬೇಕು.

ಹಣದಿಂದ ವಿದ್ಯೆಯು ಲಭಿಸುತ್ತದೆ. ಹಾಗೆಯೇ ಸಭ್ಯತೆಯೂ, ಗೌರವವೂ ಲಭಿಸು ವುದು. ಕೊನೆಯಲ್ಲಿ ಜನರ ಪ್ರೀತಿಪಾತ್ರರಾಗುವುದೂ ಹಣದಿಂದಲೇ. ಮುಕ್ತಿಯೂ ಇದರಿಂದಲೇ ಲಭಿಸುತ್ತದೆ. ವಿವೇಕಶಾಲಿಯಾಗಿ ಎಲ್ಲಾ ಶಾಸ್ತ್ರಗಳು ಹಾಗೂ ವೇದಗಳಲ್ಲಿ ನಿಪುಣನಾದರೂ, ನಟನಾಗಿಯೋ, ಸೇವಕನಾಗಿಯೋ ಜೀವನ ಭರಿಸಲು ಹಣವನ್ನು ಸಂಪಾದಿಸಬೇಕು.''

ಈ ರೀತಿಯಾಗಿ ತನ್ನ ಸ್ವಬುದ್ಧಿಯಿಂದಲೇ ಹುಟ್ಟಿದ ಭ್ರಮಾಜ್ಞಾನದಿಂದ ತನ್ನ ಗುಣಕ್ಕೆ ಅನುಗುಣಿಯಾದ ಕನ್ಯೆಯೊಬ್ಬಳನ್ನು ಮದುವೆಯಾದನು. ಹಾಗೆಯೇ ದ್ರವ್ಯಾರ್ಜನೆಯಿಂದ ಪರಾಙ್ಮುಖನಾಗಿದ್ದ, ಯಾವಾಗಲೂ ರಾಮಭಜನೆಯಲ್ಲಿಯೇ ತೊಡಗಿದ್ದು ಐಹಿಕ ಸುಖವನ್ನು ತೃಣವೆಂದು ಪರಿಗಣಿಸುತ್ತಿದ್ದ ತನ್ನ ತಂದೆಯನ್ನು ಪರಿಹಾಸ ಮಾಡಿದನು.

ತ್ಯಾಗರಾಜಸ್ತು ವಿಜ್ಞಾನಾತ್ ಶ್ರೇಯೋ ಭೂಯೋಽವಧಾರಯನ್ ।
ಶಿಶ್ರಿಯೇ ಶ್ರಿತಕಲ್ಪದ್ರೂನ್ ಶ್ರುತವರ್ಯಾನಮತ್ಸರಾನ್ ॥ ೪೭ ॥

ಆಚಾರ್ಯಾದ್ ಪೂರ್ಣಮಾದಾಯ ದ್ವಿಗುಣಂ ಚ ಸ್ವಮೇಧಯಾ ।
ಚತುರ್ಗುಣಂ ಸತೀರ್ಥ್ಯೈಶ್ಚ ಪ್ರಾಪ್ಯೈವೈದುಷ್ಯ ಸಂಪದಮ್ ॥ ೪೮ ॥

ವೇದೇ ಶಾಸ್ತ್ರೇ ತಥಾ ಗೀತೇ ಕಾವ್ಯೇಽಧೀತೀ ದ್ವಿಜಾತ್ಮಜಃ ।
ತ್ಯಾಗರಾಜೋ ಬುಧಾನ್ ಪ್ರಶ್ನಾನ್ ಪೃಷ್ಟ್ವಾ ಚಕ್ರೇ ನಿರುತ್ತರಾನ್ ॥ ೪೯ ॥

ಬಹುಭಿರ್ಬಹುಧಾ ಶಾಸ್ತ್ರೇ ಗಭೀರೇ ವಿವಿಧೇ ಯದಾ ।
ಪ್ರಶ್ನೋಽಕಾರೀ ಸಪದ್ಯೇವ ತತ್ತದುತ್ತರಮಬ್ರವೀತ್ ॥ ೫೦ ॥

ತ್ಯಾಗರಾಜನಾದರೋ ತನ್ನ ಶ್ರೇಷ್ಠಮತಿಯಿಂದ ಹೆಚ್ಚಾಗಿ ಕೀರ್ತಿಯನ್ನು ಗಳಿಸುತ್ತಾ ತನ್ನ ಆಶ್ರಯಿತರನ್ನು, ಮತ್ಸರವಿಲ್ಲದ ವಿದ್ವಾಂಸರನ್ನು ಕಲ್ಪವೃಕ್ಷದಂತೆ ನೋಡಿಕೊಳ್ಳುತ್ತಿದ್ದನು. ಆಚಾರ್ಯರಿಂದ ಪೂರ್ಣ ವಿದ್ಯೆಯನ್ನು ಗ್ರಹಿಸಿ, ತನ್ನ ಸ್ವಬುದ್ಧಿಯಿಂದ ಅದನ್ನು ದ್ವಿಗುಣಗೊಳಿಸಿ, ತನ್ನ ಸಹಪಾಠಿಗಳಿಂದ ಅದನ್ನು ನಾಲ್ಮಡಿಗೊಳಿಸಿ, ಯಾರಿಂದಲೂ ಕಿತ್ತುಕೊಳ್ಳಲಾಗದಂಥ ಐಶ್ವರ್ಯವನ್ನು ಸಂಪಾದಿಸಿದನು. ಈ ಬ್ರಾಹ್ಮಣ ಕುಮಾರನು ವೇದ, ಶಾಸ್ತ್ರ, ಸಂಗೀತ ಹಾಗೂ ಕಾವ್ಯಗಳಲ್ಲಿ ಪರಿಣತಿಯನ್ನು ಗಳಿಸಿದನು. ಪಂಡಿತೋತ್ತಮರಾದ ಬುದ್ಧಿವಂತರಿಗೆ ಪ್ರಶ್ನೆಗಳನ್ನು ಹಾಕಿ ನಿರುತ್ತರಗೊಳಿಸುತ್ತಿದ್ದನು. ಅನೇಕ ಜನರು ಅನೇಕ ಶಾಸ್ತ್ರಗಳಲ್ಲಿ ವಿಧವಿಧವಾಗಿ ಪ್ರಶ್ನೆಗಳನ್ನು ಕೇಳುತ್ತಿದ್ದಾಗಲೆಲ್ಲಾ ಅವುಗಳಿಗೆ ತತ್‌ಕ್ಷಣದಲ್ಲೇ ಉತ್ತರಗಳನ್ನು ನೀಡುತ್ತಿದ್ದನು.

ತದಾ ತದಾ ವಿರಾಮೇಷು ಸಂಗೀತಾಂಬುಧಿ ಪಾರಗಮ್ ।
"ಸೊಂಠೀ ವೇಂಕಟರಾಮಾ"ಖ್ಯ ವೈಣಿಕಂ ಸ ಸಮಾಶ್ರಿತಃ ॥ ೫೧ ॥

ತಸ್ಯೇವ ನಿರತೋ ನಿತ್ಯಂ ಸಂಪ್ರದಾಯಾನುವರ್ತಿನಾಮ್ ।
ಸತ್ಸಂಗೀತಕಲಾಂ ಲಕ್ಷ್ಯಲಕ್ಷಣೈಃ ಸಮುಮಾದದೇ ॥ ೫೨ ॥

ಸಂಗೀತಶಾಸ್ತ್ರವಿಖ್ಯಾತಾನ್ ಸರ್ವಾನ್ ರಾಗಾನ್ ಸಭೇದಕಾನ್ ।
ಲಕ್ಷ್ಯಪೂರ್ವಮಧೀತ್ಯಾಯಂ ತದಾಲಾಪಪಟುರ್ಬಭೌ ॥ ೫೩ ॥

ಭಾಷಾಂಗಾನಿ ಕ್ರಿಯಾಂಗಾನಿ ರಾಗಾಂಗಾನಿ ಚ ಸರ್ವಶಃ ।
ರಾಗಾನ್ ವಿವಿಚ್ಯ ವಿಜ್ಞಾಯ ರಕ್ತಿಮಾನಂ ಸದಾಽನ್ವಭೂತ್ ॥ ೫೪ ॥

ಗೀತೇಷ್ವಲಂಕ್ರಿಯಾಸ್ವೇವಂ ಕೀರ್ತನೇಷು ಪದೇಷು ಚ ।
ಅಧೀತೇಷು ಚ ವರ್ಣೇಷು ವ್ಯಮ್ರಾಕ್ಷೀಲ್ಲಕ್ಷ್ಮಸಂಗತಿಮ್ ॥ ೫೫ ॥

ತತೋ ಬಹ್ವರ್ಥಗಂಭೀರಾ ಬಹುರಾಗವಿಲಾಸಿನೀಃ ।
ಬಹ್ವೀಃಕೃತ್ವಾ ಕೃತೀರೇಷು ಕವಿವರ್ಯೋವ್ಯರಾಜತ ॥ ೫೬ ॥

ತೇನಾಂಧ್ರವಾಚಾಪಿ ತತ್ರ ತತ್ರ ಸ್ಥಿತಮ್ ಹರಿಮ್ ।
ವ ಕೀರ್ತನೈರರ್ಥಪುಷ್ಟೈರ್ನೈಜೈ ಮನೋಹರೈಃ ॥ ೫೭ ॥

ಮಹತಾತಾದಿರಚಿತಾ ರುಚಿರಾಃ ಕೃತೀಃ ।
ಅಭ್ಯಸ್ಯ ಮಿತ್ರೇಷು ತತ್ಪ್ರಚಾರಮಪಿ ವ್ಯಧಾತ್ ॥ ೫೮ ॥

ದೊರೆತಾಗಲೆಲ್ಲ ಸಂಗೀತಸಾಗರದ ಎಲ್ಲೆಯನ್ನು ದಾಟಿದ್ದ ಸೋಂಟೀ
ಬ ವೈಣಿಕನನ್ನು ಆಶ್ರಯಿಸುತ್ತಿದ್ದನು. ಸಂಪ್ರದಾಯಗಳನ್ನು ಪಾಲಿಸುವ
ಸಂಗೀತಸೇವೆಯಲ್ಲಿ ಯಾವಾಗಲೂ ನಿರತನಾಗಿ ಸಂಗೀತ ಕಲೆಯಲ್ಲಿ ಲಕ್ಷ್ಯ
ಮವಾಗಿ ಪರಿಗಣಿಸಿದ್ದನು. ಸಂಗೀತಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವ ಎಲ್ಲಾ
ಅವುಗಳ ಪ್ರಭೇದಗಳನ್ನೂ ಲಕ್ಷ್ಯಪೂರ್ವಕವಾಗಿ ಅಧ್ಯಯನ ಮಾಡಿ
ಡುವ ಕಲೆಗಾರಿಕೆಯನ್ನು ಪಡೆದನು.

ಭೇದಗಳಾದ ಭಾಷಾಂಗಗಳು, ಕ್ರಿಯಾಂಗಗಳು, ರಾಗಾಂಗಗಳು, ಹೀಗೆ
ನ್ನೂ ಚೆನ್ನಾಗಿ ತಿಳಿದು, ವಿವೇಚಿಸಿ, ಸಂಗೀತ ಕಲೆಗೆ ತನ್ನನ್ನು ತಾನು
ನು.

ಕಾರೆ, ಕೀರ್ತನೆ, ಪದ, ವರ್ಣ ಇತ್ಯಾದಿ ಸಂಗೀತ ಪ್ರಬಂಧವಿಶೇಷಗಳನ್ನು
ಗಳ ಲಕ್ಷಣಗಳನ್ನು ಚೆನ್ನಾಗಿ ವಿಮರ್ಶಿಸಿದನು. ಅನೇಕಾರ್ಥಗಳನ್ನು ಚೆನ್ನಾಗಿ
ಕ ರಾಗಗಳನ್ನು ತನ್ನದಾಗಿಸಿಕೊಂಡು, ಅನೇಕ ಕೃತಿಗಳನ್ನು ರಚಿಸಿ, ಕವಿ
ರಾಜಿಸಿದನು.

ಾಗೂ ಆಂಧ್ರವಾಙ್ಮಯದಲ್ಲಿ ಅಲ್ಲಲ್ಲೇ ವರ್ಣಿಸುವ ಹರಿಯನ್ನು ಅರ್ಥ
ಕೂಡಿರುವ, ನೈಜ ಹಾಗೂ ಮನೋಹರವಾದ ಕೀರ್ತನೆಗಳಿಂದ ತುಷ್ಟಿ
ತನ್ನ ತಂದೆ, ತಾತ, ಮುತ್ತಾತರಿಂದ ರಚಿಸಲ್ಪಟ್ಟ ಮನೋಹರವಾದ ರಚನೆ
ಗಿ ಅಭ್ಯಾಸಮಾಡಿ ಮಿತ್ರರಲ್ಲಿ ಅವುಗಳ ಪ್ರಚಾರಮಾಡಿದನು.

ಗೇಯಕಾರಂ ಚಾರುಶಾರೀರಶ್ರೀವಿರಾಜಿತಮ್ ।
ವೇನಮುಪೇತ್ಯೈವಂ ಬುಧಾ ಜಾತು ಮುದೋಚಿರೇ ॥ ೫೯ ॥

ಮೋಲ್ಲಾಸಿಹೃದಾ ರಾಮಬ್ರಹ್ಮಪುತ್ರ! ಜಿತೇಂದ್ರಿಯ ।
ಲೋಕೀವ್ಯಾಪ್ತ ಸತ್ಕೀರ್ತೇ ಸುಸ್ವರಾರ್ಣವ ಪಾರಗ ॥ ೬೦ ॥

ಹತೀ ಮಹತೀ ವೀಣಾ ತ್ವ ಕುತ್ರ ನಿಗೂಹಿತಾ ।
ಸ್ಯಂ ಕಿಂ ನುತೇ ನಾಕೇ ಯೇನ ಕ್ಷೋಣೀಮುಪಾತರಃ ॥ ೬೧ ॥

ಸಂಕೀರ್ತನಾದ್ ವಿಷ್ಣೋಃ ಸುಪ್ರಾಪಾ ಮುಕ್ತಿರಿತ್ಯತಃ ।
ನೇ ಕಿಂ ನರರೂಪೇಣ ಕಾವೇರೀ ತೀರರೂಗಮಃ ॥ ೬೨ ॥

ಾಸಕ್ತಿಂ ಸಹಸ್ರಾಕ್ಷ ಕ್ಷುದ್ರವೃತ್ತಿಮನಿದ್ರತಾಮ್ ।
ಕಿಂಷ್ಣೋಃ ಕಿಮಾಯಯಾಸೀರ್ವಸ್ತುಂ ಪಂಚನದೇ ಮುದಾ ॥ ೬೩ ॥

ಅಥವಾ ಸಂಸ್ಕೃತೈಃ ಶಬ್ದೈರನುಭೂತಾಂ ತು ಮಾಧುರೀಮ್ ।
ಪ್ರಾಕೃತೇಽಪ್ಯಾಂಧ್ರಭಾಷಾಯಾಮುಪಲಬ್ಧುಂ ಕಿಮುದ್ಯಮಃ ॥ ೬೪ ॥

ಗಾಂಧರ್ವಮೋಹಕೋ ಗೀತೈರತಿ ವಿದ್ಯಾಧರಃ ಸ್ವಯಮ್ ।
ಮಿತಂ ಪಂಚಮತೀನಸ್ಮಾನತಿಶೇಷೇ ಕಿಮದ್ಭುತಮ್'' ॥ ೬೫ ॥

ಇತ್ಯಲಂ ಬಾಲ ಏವಾಸ್ಮಿನ್ ಬುಧಲೋಕ ಕುಲೇಡಿತೇ ।
ಪೂರ್ವೇಷಾಂ ವಿದುಷಾಂ ನಾಮಾನ್ಯಸ್ಮರನ್ನ ಬುಧಾ ಸುಧಾ ॥ ೬೬ ॥

ವಾಗ್ಗೇಯಕಾರನಾದ, ಮಧುರ ಸುಶ್ರಾವ್ಯಕಂಠದಿಂದ ಬೆಳಗುವ ಈ ಬಾಲಕನನ್ನು ಬುದ್ಧಿವಂತರನೇಕರು ಒಂದು ಸೇರಿ ಬಹಳ ಸಂತೋಷಪಟ್ಟರು.

"ಎಲೈ ಜಿತೇಂದ್ರಿಯನೇ ! ರಾಮನನ್ನು ಸಂತೋಷಗೊಳಿಸುವ ಕಲೆಯನ್ನು ಹೃದಯದಲ್ಲಿ ಹೊಂದಿರುವವನೇ ! ರಾಮಬ್ರಹ್ಮಪುತ್ರನೇ ! ಮೂರು ಲೋಕದಲ್ಲಿ ಕೀರ್ತಿವಂತನಾಗಿರುವವನೇ ! ಸುಸ್ವರ ಸಮುದ್ರವನ್ನು ದಾಟಿರುವವನೇ ! ಅತ್ಯಂತ ಮಹತ್ತಾದ ವೀಣಾಧಾರಿಯೇ ! ಯಾವ ನಾರದನ ವೀಣೆಯಿಂದ ಸ್ವರ್ಗವು ಮೆರೆಯುತ್ತಿತ್ತೋ ಅಂತಹ ವೀಣೆಗೆ ಇನ್ನೆಲ್ಲಿಯ ಆ ಮಹತ್ವ! (ನಿನ್ನ ವೀಣೆಯು ನಾರದನ ವೀಣೆಗಿಂತಲೂ ಶ್ರೇಷ್ಠವಾದುದು) ; ಕಲೆಯ ಸಂಕೀರ್ತನೆಯಿಂದ ವಿಷ್ಣುಪದವಿ ಅಥವಾ ಮುಕ್ತಿ ದೊರೆಯಲೆಂದು ನರರೂಪದಿಂದ ಕಾವೇರೀ ತೀರಕ್ಕೆ ಬಂದಿರುವ ಮುನಿಯೋ, ಏನೋ ! ಸುರಾಪಾನಾಸಕ್ತನಾದ ಇಂದ್ರನು ಕ್ಷುದ್ರವೃತ್ತಿಯಿಂದ ಅನಿದ್ರಿತನಾಗಿರುವುದನ್ನು ಸಹಿಸಲಾಗದೆ ಈ ಪಂಚನದ ಕ್ಷೇತ್ರದಲ್ಲಿ ಸಂತೋಷವಾಗಿ ವಾಸಿಸಲು ಬಂದಿರುವೆಯೋ, ಏನೋ ! ಮಧುರವಾದ ಸಂಸ್ಕೃತ ಶಬ್ದಗಳಿಂದ ರಸಾನುಭವ ಉಂಟುಮಾಡಲು ಹಾಗೂ ಅನುಭವಿಸಲು ಅಥವಾ ಪ್ರಾಕೃತವಾದರೂ ಆಂಧ್ರಭಾಷೆಯಲ್ಲಿ ಇದನ್ನು ಪಡೆಯಲು ನಿನ್ನ ಪ್ರಯತ್ನವೋ, ಏನೋ ! ಈ ಗಂಧರ್ವಮೋಹಕವಾದ ಹಾಡುಗಳು ಸ್ವಯಂ ವಿದ್ಯಾಧರನನ್ನೇ ಮೀರಿಸಿವೆ. ಇನ್ನು ಅಲ್ಪಮತಿಗಳಾದ ನಮ್ಮನ್ನು ಆಕರ್ಷಿಸುವುದರಲ್ಲಿ ವಿಶೇಷವೇನಿದೆ !"

ಈ ರೀತಿಯಾಗಿ ಬುಧಜನರ ಸಮೂಹವು ಈ ಬಾಲಕನನ್ನು ನೆನೆಸಿಕೊಳ್ಳುವಾಗ ಪೂರ್ವಾಚಾರ್ಯರುಗಳನ್ನು ನೆನೆಯುವುದು ವ್ಯರ್ಥವೆಂದು ಬಹುಮಟ್ಟಿಗೆ ಮರೆತು ಬಿಟ್ಟಿದ್ದರು.

ಸದ್ವಿದ್ಯಾಪ್ರಾಪ್ತಯೇ ಸಂತಂ ಗುರುರಾಜಮಸೇವತ ।
ಕ್ಷುದ್ರಾರ್ಥತ್ಯಾಗಿನಾನೇನ ಶ್ರಿಯಂತೇಽತ್ರ ಕುತೋಽಪರೇ ॥ ೬೭ ॥

ಶ್ರೀರಾಮಪ್ರೀತಯೇ ಗಾಯನ್ ಪೂಜಯನ್ ತನ್ಮುದೇ ಸದಾ ।
ಶ್ರೀರಾಮಭಕ್ತಸಂಯುಕ್ತೋ ವಿರೇಜೇಽಯಂ ನಿರಾಮಯಃ ॥ ೬೮ ॥

ಸಂಗೀತಜ್ಞಾನಿನಾಂ ವರ್ಯಾಃ ದೀಕ್ಷಿತಾಚಾರ್ಯ ಪುಂಗವಾಃ ।
ಏತಸ್ಯ ಗಾನಮಾಧುರ್ಯಂ ಶ್ರುತ್ವಾ ದರ್ಪಭರಂ ಜಹುಃ ॥ ೬೯ ॥

ಮಾತುಯರ್ಯೌವನಹಾಸೋಽಸ್ಮಿನ್ನಿತ್ಯೇಷಾಮಾಸೀದ್ ಹಿ ನಿರ್ಣಯಃ'' ॥ ೭೦ ॥

ಕೇಚಿತ್ತಚ್ಛಿಷ್ಯತಾಂ ಲಬ್ಧ್ವಾ ಸತ್ಸಂಗೀತ ಕಲೇಪ್ಲವಾಃ ।
ಐಹಿಕಾಮುಷ್ಮಿಕೇ ಧರ್ಮ್ಯೇ ಫಲೇ ಪ್ರಾಪುರ್ಯಶಸ್ವಿನಃ ॥ ೭೧ ॥

ಸದ್ವಿದ್ಯೆಯ ಪ್ರಾಪ್ತಿಗಾಗಿ ಸಂತನಾದ ಗುರುರಾಜನನ್ನು ಸೇವಿಸಿದರು. ಐಹಿಕ ಸುಖಗಳನ್ನು ತ್ಯಾಗ ಮಾಡಿರುವ ಇವನನ್ನು ಆಶ್ರಯಿಸಿರುವವರಿಗೆ ಬೇರೆಯವರು ಯಾರು ತಾನೇ ಬೇಕು! ಶ್ರೀರಾಮನನ್ನು ಸಂತೃಪ್ತಿಗೊಳಿಸಲು ಯಾವಾಗಲೂ ಅವನನ್ನೇ ಪೂಜಿಸುತ್ತಾ, ಹಾಡುತ್ತಾ, ನಿರಾಮಯನಾದ ಇವನು ಶ್ರೀರಾಮನ ಭಕ್ತರ ಗುಂಪಿನಲ್ಲಿ ವಿರಾಜಿಸಿದನು.

ಸಂಗೀತಜ್ಞಾನವನ್ನು ಹೆಚ್ಚಾಗಿ ಹೊಂದಿದ್ದವರು, ಸಂಗೀತಕ್ಷೇತ್ರದಲ್ಲಿಯೇ ದೀಕ್ಷೆಯನ್ನು ತೆಗೆದುಕೊಂಡಿದ್ದ ಆಚಾರ್ಯವರ್ಯರು, ಇವನ ಗಾನಮಾಧುರ್ಯವನ್ನು ಕೇಳಿದ ನಂತರ ತಮ್ಮ ಅಹಂಕಾರವನ್ನು ತ್ಯಜಿಸಿದರು.

''ಈ ಭೂಮಿಯಲ್ಲಿ ನಾನು ಹುಟ್ಟಿದ್ದೇನೆ. ಈ ಭೂಮಿಯು ಚಂಚಲವಾಯಿತು. ಗುರುರಾಜನ ಸೇವೆ ಮಾಡದಿದ್ದರೆ ನನ್ನ ಜನ್ಮವು ವ್ಯರ್ಥವಾಗುವುದು. ಇದೇ ಸರಿಯಾದ ನಿರ್ಣಯ''—ಹೀಗೆ ಯೋಚಿಸಿ ಕೆಲವರು ತ್ಯಾಗರಾಜರ ಶಿಷ್ಯತ್ವವನ್ನು ಸ್ವೀಕರಿಸಿ ಸಂಗೀತ ಕಲೆಯಲ್ಲಿ ಮುಳುಗಿದರು ಮತ್ತು ಐಹಿಕ ಆಮುಷ್ಮಿಕ ಧರ್ಮಗಳಲ್ಲಿ ಯಶಸ್ವಿಗಳಾಗಿ ಫಲವನ್ನು ಪಡೆದರು.

ಅಮುಷ್ಯಗಾನಸಂತುಷ್ಟೈರ್ಧನಾಢ್ಯೈಃ ಪಾರಿತೋಷಕಮ್ ।
ಯದ್ಯದಾದರತೋಽದಾಯಿ ತದ್ದೀನೇಭ್ಯೋಽಸ್ಪೃಶನ್ ದದೌ ॥ ೭೨ ॥

ಯದ್ಯಸಾವಗ್ರಹೀಷ್ಯತ್ ತದ್ ದತ್ತಮಾಪ್ತತಮೈರ್ಮುದಾ ।
ಚಿರಾನುವೃತ್ತಂ ರಿಕ್ತತ್ವಂ ತನ್ನ್ಯವರ್ತಿಷ್ಯತಾನ್ವಯೇ ॥ ೭೩ ॥

ವಿಜ್ಞಾಯ ಚಂಚಲಂ ದ್ರವ್ಯಮಾಪದಾಂ ಪ್ರಥಮಾಸ್ಪದಮ್ ।
ಸ ರಾಮಸನ್ನಿಧೇರನ್ಯಂ ನಿಧಿಂ ಸ್ವಪ್ನೇಽಭಿ ನಾಸ್ಮರತ್ ॥ ೭೪ ॥

ಇವರುಗಳ ಗಾನದಿಂದ ಸಂತುಷ್ಟರಾದ ಅನೇಕ ಶ್ರೀಮಂತರು ಕೊಟ್ಟ ಬಹುಮಾನಗಳನ್ನು ತ್ಯಾಗರಾಜರ ಶಿಷ್ಯರಾದ ನಂತರ ಮುಟ್ಟಲು ನಿರಾಕರಿಸಿದರು. ಆಪ್ತರಿಂದ ಸಂತೋಷದಿಂದ ಕೊಡಲ್ಪಟ್ಟ ಈ ಪಾರಿತೋಷಕಗಳನ್ನು ಬಹಳ ಕಾಲದವರೆಗೆ ಸ್ವೀಕರಿಸದೆ ಇದ್ದುದರಿಂದ ತ್ಯಾಗರಾಜರ ಮನೆಯಲ್ಲಿ ಬಡತನವು ತಾಂಡವವಾಡತೊಡಗಿತು. ಇಷ್ಟಾದರೂ ಸಹ ಹಣದ ಚಂಚಲತೆಯನ್ನು ಅರಿತಿದ್ದ ತ್ಯಾಗರಾಜರು, ರಾಮನಿಧಿಯನ್ನಲ್ಲದೆ ಬೇರೆ ಯಾವುದೇ ನಿಧಿಯನ್ನು ಕುರಿತು ಸ್ವಪ್ನದಲ್ಲೂ ಯೋಚಿಸಲಿಲ್ಲ.

ಮಂದಾಕ್ರಾಂತೇ ಜಗತಿ ಬಹುಧಾ ಜಾತ ವೈರಾಗ್ಯಲಕ್ಷ್ಮ್ಯಾಃ
ಸ್ವಾಭ್ಯಸ್ತಾನಾಂ ಯದಧಿಗಮನಾಚ್ಚಾರಿತಾರ್ಥ್ಯಂ ಕಲಾನಾಮ್ ।
ಯೇನ ಶ್ರೇಯಃ ಸ್ಥಿರಮಥ ಯತೋ ಬ್ರಹ್ಮಸಬ್ರಹ್ಮಚರ್ಯಾ
ತತ್ತಾದೃಕ್ಷೇ ಸಮುಚಿತಪಥೇ ತ್ಯಾಗರಾಜೋ ವಿರೇಜೇ ॥ ೭೫ ॥

ಇತಿ 'ಗಾಯಕ ಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತ ವಿರಚಿತೇ ಶ್ರೀ ಮತ್ತ್ಯಾಗರಾಜವಿಜಯೇ
ದ್ವಿತೀಯ ಸರ್ಗಃ

ಜಗತ್ತಿನಲ್ಲಿ ಮೂಢಜನರು ಅಧಿಕವಾಗಿದ್ದರೂ ಸಹ, ಹಣದ ಬಗ್ಗೆ ಉಂಟಾದ ವೈರಾಗ್ಯಭಾವದಿಂದ ತಾನು ಅಭ್ಯಾಸಮಾಡಿದ ಕಲೆಗಳ ಸದ್ವಿನಿಯೋಗಕ್ಕಾಗಿ ಹಾಗೂ ಯಾವ ಸ್ಥಿರವಾದ ಸೇವೆಯಿಂದ ಮುಕ್ತಿ ಪಡೆಯಬಹುದೋ ಅಂಥವುಗಳಿಗಾಗಿ ಒಳ್ಳೆಯ ದಾರಿಯಲ್ಲಿ ಮುಂದುವರಿಯುತ್ತಾ ತ್ಯಾಗರಾಜರು ಶೋಭಿಸಿದರು.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ಎರಡನೆಯ ಸರ್ಗವು

## ಪದಾರ್ಥ ಚಂದ್ರಿಕಾ

## ಸರ್ಗ ಎರಡು

೧. ಋಷಭನನ್ನು ತನ್ನ ಧ್ವಜದಲ್ಲಿ ಹೊಂದಿರುವವನು, ಅಂದರೆ ಶಿವನು. ಅವನ ಕಾರುಣ್ಯದಿಂದ, ಅಂದರೆ ಕೃಪಾಬಲದಿಂದ. ತನಯರ್ಷಭಃ—ಪುತ್ರಶ್ರೇಷ್ಠನು. ಗಾಯಕ ನೆಂದರೆ ಗಾನಶೀಲನಾದ ತ್ಯಾಗರಾಜರು.

೨. ಧರ್ಮ್ಯಂ—ಧರ್ಮದಿಂದ ಹೊರತಾಗದೇ ಇರುವುದು. ಯತಾತ್ಮಕೌ— ನಿಯಮಬದ್ಧವಾದ ಮನಸ್ಸು ಮತ್ತು ಶರೀರವನ್ನುಳ್ಳವರಾಗಿ. ಆಚರಿಸಿದರು—ಅನು ಷ್ಠಾನ ಮಾಡಿದರು.

೩. ವಲಕ್ಷಪಕ್ಷೇ—ಶುಕ್ಲಪಕ್ಷದಲ್ಲಿ. ಪುಷ್ಯರ್ಕ್ಷೇ—ಪುಷ್ಯ ನಕ್ಷತ್ರದಲ್ಲಿ.

೪. ತಾಂತಾ—ಪರಿಶ್ರಾಂತಳಾದವಳು. ಭಾಂತಂ—ಶೋಭಾಯಮಾನನಾದ ಪುತ್ರ ನನ್ನು ಪಡೆದಳು. ಕಲಾನಿಧಿಂ—ಪೂರ್ಣ ಕಲೆಗಳಿಂದ ತುಂಬಿದ ಚಂದ್ರನನ್ನುಳ್ಳ ಪೂರ್ವ ದಿಕ್ಕು. ಕುವಲಯಪ್ರಿಯಂ—ನೈದಿಲೆಗಳಿಗೆ ಸಂತೋಷವನ್ನುಂಟುಮಾಡುವ; ಭೂಮಂಡ ಲಕ್ಕೆ ಉಲ್ಲಾಸ ತರುವಂತಹ ಎಂದೂ ಅರ್ಥ.

೫. ಮೂರ್ತಃ—ದೇಹಧಾರಿಯಾದ. ಆರ್ತಿದಾರಕಃ—ಶೋಕವನ್ನು ಹೋಗಲಾಡಿಸುವ. ಶಿಶುಚ್ಛಲಾತ್—ಇದು ಇಲ್ಲಿ ಕೈತವಾಪನ್ಹುತಿಯಾಗಿದೆ.

೬. ಹುಟ್ಟಿದ ಕೂಡಲೇ ಮಗುವಿಗೆ ಸ್ವಭಾವಸಿದ್ಧವಾದ ಕ್ವಕ್ವ ಎಂಬ ರೀತಿಯ ಅಳುವಿಕೆಯು ರಾಮಸಾಕ್ಷಾತ್ಕಾರದ ಅಭಿಲಾಷೆಯನ್ನು ಸೂಚಿಸುವ ಪ್ರಯುಕ್ತ ಉತ್ಪ್ರೇಕ್ಷೆ ಮಾಡಿರುವುದರಿಂದ ಇದು ಹೇತೂತ್ಪ್ರೇಕ್ಷೆ.

೭. ಫಲವಲ್ಲದೇ ಇರುವ ಮಗುವಿನ ಎರಡು ಮುಷ್ಟಿಕಟ್ಟುಗಳನ್ನು ಫಲವೆಂದು ಉತ್ಪ್ರೇಕ್ಷೆ ಮಾಡಿದೆ. ಇದು ಫಲೋತ್ಪ್ರೇಕ್ಷೆ.

೮. ಜಾತರೂಪಹಸದ್ರೂಪಂ—ಚಿನ್ನವನ್ನು ಗೇಲಿ ಮಾಡುವ ರೀತಿಯ ಸೌಂದರ್ಯವುಳ್ಳವನಾದ ತ್ಯಾಗರಾಜ ಎಂಬ ಹೆಸರಿನಿಂದ ನಾಮಕರಣ ಮಾಡಿದರು.

೯. ರಿಂಗಣಂ—ಮೊಣಕಾಲುಗಳಿಂದ ತೆವಳಿ ನಡೆಯುವುದು. ಅರ್ಭಕೈಃ—ಬಾಲಕರಿಂದ.

೧೦. ಕಲ್ಯಾಣಿ ಎಂಬಿವೇ ಶಬ್ದಗಳು ರಾಗಗಳ ಹೆಸರುಗಳು. ಸಾರಂಗಗಳಿಗೂ ಪಶುಪಕ್ಷಿಗಳಿಗೂ ಮೋಹನಂ ಅಂದರೆ ಮನೋರಂಜನೆಯನ್ನು ಮಾಡಿದನು. ಇನ್ನು ರಸಿಕರಾದ ಮನುಷ್ಯರ ಬಗ್ಗೆ ಹೇಳುವುದೇನಿದೆ ! ಎಂದು ತಾತ್ಪರ್ಯ.

ಶ್ರಿಯಾಂ—ಸಂಪತ್ತಿನಲ್ಲಿ. ರಾಗಃ–ಆಸಕ್ತಿ. ಅದರ ವಿಜಯ ಅಂದರೆ ಅದನ್ನು ದೂರ ಮಾಡುವುದು. ವೈರಾಗ್ಯದಿಂದ ಕೂಡಿದ ಎಂದರ್ಥ.

೧೧. ನಾಯಕೀ, ಭೂಪಾಲ ಮುಂತಾದ ಶಬ್ದಗಳು ಕೂಡ ರಾಗವಿಶೇಷವನ್ನು ಹೇಳುತ್ತವೆ. ಧನ್ಯಾಃ ಅಸೀಮಾಃ—ಪರಿಮಿತಿಯಿಲ್ಲದಷ್ಟು ಕಲೆಗಳು, ವಿದ್ಯೆಗಳು ಯಾರಲ್ಲಿ ಇವೆಯೋ ಅಂತಹವನು. ಧನ್ಯಾಸೀ—ರಾಗದ ಹೆಸರು.

೧೨. ವಸಂತ ಮೊದಲಾದ ಶಬ್ದಗಳು ರಾಗದ ವಿಶೇಷ ವಾಚಕಗಳು. ಅಲ್ಲಿ ವಸಂತದ ರಂಜನೆಯನ್ನು ಮಾಡುವುದು ಮೋಡಗಳಿಗೆ. ಮೋಡಗಳ ರಂಜನೆಯನ್ನು ಮಾಡುವುದು ಬೆಳದಿಂಗಳು. ಬೆಳದಿಂಗಳ ರಂಜನೆ ಮಾಡುವುದು ಸೂರ್ಯ. ಇಲ್ಲಿ ಕೆಲವು ರಾಗಗಳ ಹೆಸರುಗಳನ್ನು ಹೇಳುವುದಕ್ಕಾಗಿ ವಿರೋಧಾಭಾಸ ಪ್ರಯೋಗವಾಗಿದೆ.

೧೩. ಸಂತೌ ಆನಂದಯಾತ್—ಜ್ಞಾನಿಗಳಾದ ಮಾತಾಪಿತೃಗಳನ್ನು ಸಂತೋಷಪಡಿಸಿದನು.

೧೪. ದ್ರಾವಿಡೀ–ತಮಿಳು. ಆಂಧ್ರೀ–ತೆಲುಗು. ಗೈರ್ವಾಣೀ–ಸಂಸ್ಕೃತ. ಬಭೌ–ಶೋಭಿಸಿತು.

೧೫. ಮನಃ ಚಕ್ರೇ—ನಿಶ್ಚಯ ಮಾಡಿದನು. ಪಂಚನದಂ—ತಂಜಾವೂರಿನಿಂದ ಏಳು ಮೈಲಿಗಳ ದೂರದಲ್ಲಿರುವ ತಿರುವಾಡಿ ಅಥವಾ ತಿರುವೈಯ್ಯಾರ್.

೧೬. ಕಥಂಚನ—ಆತನಿಗೆ ಆ ಪಟ್ಟಣವನ್ನು ಬಿಡುವ ವಿಚಾರದಲ್ಲಿ ಅಸಹಿಷ್ಣುತೆ ಎಂದರ್ಥ.

೧೯. ಕಾವೇರಿ ಎಂಬ ಹೆಸರಿನ ನದಿ. ಅಸಂಗಿಪುಂಗವಾಃ—ವಿರಕ್ತಶ್ರೇಷ್ಠರು.

೨೦. ಈ ಕ್ಷೇತ್ರದಲ್ಲಿ ಶೋಭಿಸುತ್ತಿರುವ ಪಾರ್ವತಿಯ ಹೆಸರು ಧರ್ಮಸಂವರ್ಧನಿ; ಪಶುಪತಿಯ ಹೆಸರು ಪ್ರಣತಾರ್ತಿಹರ. ಇವರಿಬ್ಬರಿಗೂ ಪ್ರಿಯವಾದುದು, ಇಷ್ಟವಾದುದು.

ವಾಗೀಶಮುನಿ...ವೈಭವಂ ಎಂಬಲ್ಲಿ ಈ ಕಥೆಯನ್ನು ಹೇಳಲಾಗಿದೆ. ಶೈವ ಸಮಯಾಚಾರ್ಯರು (ಧರ್ಮಾಚಾರ್ಯರು) ನಾಲ್ವರುಗಳಲ್ಲಿ ಎರಡನೆಯ ವಾಗೀಶನೆಂಬ ಭಕ್ತನ ಪ್ರಾರ್ಥನೆಯನ್ನು ನೇರವಾಗಿ ಭಗವಾನ್ ಪಾರ್ವತೀಪತಿಯು ಮನ್ನಿಸಿ, ಅವನನ್ನು ಅಲ್ಲಿಯೇ ಒಂದು ಪವಿತ್ರ ಕೊಳದಲ್ಲಿ ಸ್ನಾನಮಾಡಿಸಿ, ಇದೇ ಕ್ಷೇತ್ರದಲ್ಲಿ ತನ್ನ ವಾಸಸ್ಥಳವಾದ ಕೈಲಾಸಪರ್ವತವನ್ನು ಅವನಿಗೆ ತೋರಿಸಿ ಅನುಗ್ರಹ ಮಾಡಿದನು. ಆದ್ದರಿಂದಲೇ ಈ ಕ್ಷೇತ್ರವನ್ನು ದಕ್ಷಿಣ ಕೈಲಾಸ ಎಂದು ತಿಳಿದವರು ಹೇಳುತ್ತಾರೆ.

೨೧. ಗೈರ್ವಾಣೀ...ಶಾಲಾ—ರಾಜ ಸಂಸ್ಕೃತ ಮತ್ತು ತಮಿಳು ಅಧ್ಯಯನದ ಮಹಾವಿದ್ಯಾಲಯ.

೨೨. ಯತ್ರಾವತ...ಪರಾಃ—ಯುವಜನವೇದಸಂವರ್ಧನೀ ಎಂದೂ ವಿದ್ಯಾವಿಕಾಸಿನೀ ಎಂದೂ ಅಲ್ಲಿನ ಸಭೆಗಳ ಹೆಸರು.

೨೩. ಘನಪಾಠಿ, ಮುಕ್ತಾಮಣಿ—ಬಹುಕಾಲ ದ್ವಿಜಸಮಾಜಕ್ಕೆ ವೇದಗಳನ್ನು ಪಾಠಮಾಡಿಸಿ ಕೀರ್ತಿ ಗಳಿಸಿದಂಥ ಮುತ್ತುಘನಪಾಠಿ ಎಂಬ ಒಬ್ಬ ಶ್ರೋತ್ರಿಯಶ್ರೇಷ್ಠರು.

೨೩-೨೪. ವಿದ್ಯಾರತ್ನಂ ಶಾಸ್ತ್ರರತ್ನಾಕರ, ನ್ಯಾಯವಿಶಾರದ, ಗಾಯಕರತ್ನಂ ಎಂಬ ಪದಗಳು ಅಲ್ಲಿನ ಪ್ರಮುಖ ವಿದ್ವಾಂಸರ ಬಿರುದುಗಳನ್ನು ಸೂಚಿಸುತ್ತವೆ.

೨೭. ಜಗಾಮ ಎಂಬಲ್ಲಿಯವರೆಗೆ ಹಿಂದಿನ ಒಂಬತ್ತು ಶ್ಲೋಕಗಳಿಗೆ ಏಕವಾಕ್ಯತೆ. ಸಹ್ಯಸುತಾಽಮೃತೇ—ಕಾವೇರಿಯ ನೀರಿನಲ್ಲಿ.

೨೮. ಕವೇರತನಯಾ—ಕಾವೇರಿ. ಕವೇಃ ಅತನುಚೇತಸಃ—ವಿಶಾಲ ಮನಸ್ಸುಳ್ಳ ಕವಿ.

೩೩. ವ್ಯಾನಸೇ—ಕಳೆದುಕೊಂಡನು.

೩೫. ಉಂಛವೃತ್ತಿ—ಗದ್ದೆಯಿಂದ ಅಥವಾ ಬೇರೆಯವರ ಮನೆಯಿಂದ ಕಾಳುಕಾಳಾಗಿ ದೊರೆತ ಅಥವಾ ಅವರಿಂದ ಕೊಡಲ್ಪಟ್ಟದ್ದನ್ನು ಸಂಗ್ರಹಿಸುವುದು, ಭಿಕ್ಷಾಟನೆ.

೩೭. ಅಕಿಂಚನಾಯ—ದರಿದ್ರನಿಗೆ, ನಿಸ್ಸಹಾಯಕನಿಗೆ. ಶುಭ್ರಾಯ—ನಿರ್ಮಲವಾದ ಮನಸ್ಸುಳ್ಳವನಿಗೆ.

೩೭. ಶ್ರೀಮಜ್ಜನಾಖ್ಯ ವೀಧೀ—ತಿರುಮಂಜನ ಬೀದಿ, ತಿರುವೈಯ್ಯಾರ್.

೪೭. ಶ್ರಿತಕಲ್ಪದ್ರೂನ್—ಆಶ್ರಿತರಿಗೆ ಕಲ್ಪವೃಕ್ಷದಂತಿರುವ.

೫೪. ಭಾಷಾಂಗಾನಿ, ಕ್ರಿಯಾಂಗಾನಿ, ರಾಗಾಂಗಾನಿ—ರಾಗ ಪ್ರಭೇದಗಳು.

೫೫. ವ್ಯಮ್ರಾಕ್ಷೀತ್—ವಿಮರ್ಶೆ ಮಾಡಿದನು.

೫೯. ಶಾರೀರಶ್ರೀಃ—ಇಂಪಾದ, ಕೇಳಬಹುದಾದ ಕಂಠನಾದ ಸಂಪತ್ತು.

೬೦. ನಾರದ ಎಂದು ತಿಳಿದ ತಜ್ಞರ ಪ್ರಶ್ನೆಯು ಸಂಗತವಾಗುವುದು. ನಾರದ ಮುನಿಯ ವೀಣೆಗೆ ಮಹತೀ ಎಂದು ಹೆಸರು.

೬೨. ಆಗಮಃ—ಬಂದಿರುವ.

೬೩. ಸುರಾಸಕ್ತಿಂ—ಸುರೆಯಲ್ಲಿ, ಅಂದರೆ ಮದ್ಯದಲ್ಲಿ ಆಸಕ್ತಿ. ವಸ್ತುಂ—ವಾಸ ಮಾಡಲು.

೬೪. ಕಿಮುದ್ಯಮಃ—ನಿನ್ನ ಎಂದು ಉಳಿದ ವಾಕ್ಯಭಾಗ.

೬೫. ಅತಿವಿದ್ಯಾಧರಃ—ವಿದ್ಯಾಧರನನ್ನು ಮೀರಿಸಿದವನು. ಮಿತಂಪಚಮತೀನ್—ಅಲ್ಪಬುದ್ಧಿಯುಳ್ಳವರನ್ನು.

೬೬. ಮುಧಾ—ವ್ಯರ್ಥವಾಗಿ. ಆ ಹೆಸರಿನಿಂದ ಅವರ ಹೆಸರುಗಳ ಅರ್ಥವಾಯಿತು.

೭೩. ರಿಕ್ತತ್ವಂ—ದಾರಿದ್ರ್ಯವನ್ನು. ಅನ್ವಯೇ—ಕುಲದಲ್ಲಿ.

೭೪. ರಾಮಸನ್ನಿಧೇ—ರಾಘವನ ಸನ್ನಿಧಾನದಿಂದಾಗಿ.

೭೫. ಮಂದಾಕ್ರಾಂತೇ—ಮೂಢಜನರಿಂದ ತುಂಬಿದ. ಯದಧಿಗಮನಾತ್—ಯಾವ ಸನ್ಮಾರ್ಗದ ಆಶ್ರಯದಿಂದ. ಬ್ರಹ್ಮಸಬ್ರಹ್ಮಚರ್ಯಾಃ—ಬ್ರಹ್ಮನಲ್ಲಿ ಐಕ್ಯ, ಅಂದರೆ ಮುಕ್ತಿ. ವಿರೇಜೇ—ಶೋಭಿಸಿದನು.

# ಸರ್ಗ ಮೂರು

ಗಾಂ ಧಾರಯಿತಾ ತಾತಸ್ತ್ಯಾಗರಾಜಂ ನಿಜಾಂ ಶುಭಾಮ್ ।
ಗಾಂಧರ್ವವೇದತತ್ವಜ್ಞಂ ಕನ್ಯಕಾಮುಪ್ಯಧಾರಯತ್ ॥ ೧ ॥

ಗೃಹಕೃತ್ಯೇಷು ದಾಸೀವ ಸೌಂದರ್ಯೇ ಕಮಲೇವ ಚ ।
ಮಾತೇವಾವ್ಯಾಜವಾತ್ಸಲ್ಯೇ ಸ್ಥಿತಾಂ ಮಂತ್ರೀವ ಬೋಧನೇ ॥ ೨ ॥

ವಿಶಿಷ್ಟಕುಲಸಂಭೂತಾಂ ವಿನಯಾಭರಣೋಜ್ವಲಾಮ್ ।
ತ್ಯಾಗರಾಜೋ ವಿಶಾಲಾಕ್ಷೀಂ ಪರ್ಯಣೈಷೀತ್ ಸ ಕನ್ಯಕಾಮ್ ॥ ೩ ॥

ಕನ್ಯಾಸಾ ರುಚಿರಂ ರೂಪಂ ಮಾತಾ ವಿತ್ತಮನುತ್ತಮಮ್ ।
ಪಿತಾ ಚ ಸುಶ್ರುತಂ ಬಂಧುಃ ಕುಲೈಃ ಶ್ರೇಷ್ಠಂ ತಥಾಪ್ನುವನ್ ॥ ೪ ॥

ತಯಾಸಾರ್ಧಂ ಶುಭಾನ್ ಧರ್ಮಾನ್ ಆಚರನ್ ಶ್ರುತಿಚೋದಿತಾನ್ ।
ಗಾರ್ಹಸ್ಥ್ಯೇsಪಿ ಮಹಾಧರ್ಮಾಂ ಬ್ರಹ್ಮಚರ್ಯಮಚೀಚರತ್ ॥ ೫ ॥

ಉಂಛವೃತ್ತ್ಯೈವ ಭಕ್ತಾನಾಂ ಸರ್ವಮಿಷ್ಟಂ ಪ್ರಚೂರಯನ್ ।
ಆತಿಥ್ಯೇ ಹರಿಸೇವಾದೌ ನಿರತೋ ರತಿಮಾಯಯೌ ॥ ೬ ॥

'ಪಿತರೌ ಪ್ರಥಮೋ ದೇವ' ಇತಿ ಮತ್ವಾ ವಿದಾಂವರಃ ।
ಶುಶ್ರೂಷಾಂ ಶ್ರದ್ಧಯಾ ಚಕ್ರೇ ಪಿತ್ರೋಃ ಪಿತೃ ಜನಪ್ರಿಯಃ ॥ ೭ ॥

ಜಪ್ಯೇಶಂ ತಾಮಸಂ ತ್ಯಕ್ತ್ವಾ ದ್ರವ್ಯಮಾತ್ರಾರ್ಜನೇ ರತಮ್ ।
ಸಾತ್ವಿಕೇ ತ್ಯಾಗರಾಜೇsಸ್ಮಿನ್ ಪಿತರೌ ತೃಪ್ತಿಮಾಪತುಃ ॥ ೮ ॥

ಉಪೇಕ್ಷ್ಯ ರಾವಣಂ ಮತ್ತಂ ಸದಾ ರಾಮಾವಲಂಬನೇ ।
ವಿಭೀಷಣೇ ತುತೋಷಾಲಂ ತ್ಯಾಗರಾಜೇ ಶುಭೋ ಜನಃ ॥ ೯ ॥

ಹಿರಿಯರ ಉಪದೇಶವನ್ನು ಪಾಲಿಸುವ ರಾಮಬ್ರಹ್ಮನು ತನ್ನ ಮಗನಾದ, ಗಾಂಧರ್ವ ವಿದ್ಯೆಯ ತತ್ವಜ್ಞನಾದ ತ್ಯಾಗರಾಜರು ಕನ್ನಿಕೆಯೊಡನೆ ವಿವಾಹವಾಗುವಂತೆ ಮಾಡಿದನು.

ಮನೆಕೆಲಸಗಳಲ್ಲಿ ದಾಸಿಯಂತೆಯೂ, ಸೌಂದರ್ಯದಲ್ಲಿ ಕಮಲದಂತೆಯೂ, ತಿಳುವಳಿಕೆ ನೀಡುವಲ್ಲಿ ಮಂತ್ರಿಯಂತೆಯೂ, ನಿರ್ವ್ಯಾಜ ವಾತ್ಸಲ್ಯದಲ್ಲಿ ತಾಯಿಯಂತೆಯೂ ಆ ಕನ್ನಿಕೆಯು ಇದ್ದಳು.

ವಿಶಿಷ್ಟ ಕುಲದಲ್ಲಿ ಜನಿಸಿದ, ವಿನಯವನ್ನೇ ಆಭರಣವಾಗಿ ಹೊಂದಿರುವ, ವಿಶಾಲಾಕ್ಷಿಯಾದ ಆ ಕನ್ನಿಕೆಯನ್ನು ತ್ಯಾಗರಾಜರು ಮದುವೆಯಾದರು. ಆ ಸುಂದರವಾದ

ಕನ್ಯೆಯು, ಅನರ್ಘ್ಯವಾದ ತಾಯಿಯನ್ನೂ, ಚೆನ್ನಾಗಿ ತಿಳಿದ ತಂದೆಯನ್ನೂ, ಬಂಧುವನ್ನೂ, ಶ್ರೇಷ್ಠವಾದ ಕುಲವನ್ನೂ ಹೊಂದಿದಳು.

ತ್ಯಾಗರಾಜರು ಅವಳ ಜೊತೆಯಲ್ಲಿ ವೇದೋಕ್ತವಾದ ಶುಭಕರ್ಮಗಳನ್ನು ಆಚರಿಸುತ್ತಾ, ಗೃಹಸ್ಥನಾಗಿದ್ದರೂ ಮಹಾಧರ್ಮಿಷ್ಠನಾಗಿ ಬ್ರಹ್ಮಚರ್ಯಪಾಲನೆಯನ್ನು ಮಾಡುತ್ತಿದ್ದರು. ಭಿಕ್ಷಾವೃತ್ತಿಯಿಂದಲೇ ದೊರೆತಿದ್ದನ್ನು ಭಕ್ತರ ಪೂರ್ತಿಕೆಗೆ ವಿನಿಯೋಗಿಸುತ್ತಾ, ಆತಿಥ್ಯ ಹಾಗೂ ಪರಿಸೇವೆಗಳಲ್ಲಿ ತನ್ನೆಲ್ಲ ಕಾಲವನ್ನು ಕಳೆಯುತ್ತಿದ್ದರು.

ಜ್ಞಾನಿಶ್ರೇಷ್ಠನಾದ ತಂದೆಯನ್ನು ಮೊದಲನೆಯ ದೇವರೆಂದು ತಿಳಿದು, ಬಹಳ ಶ್ರದ್ಧೆಯಿಂದ ತಂದೆಗೆ ಅತ್ಯಂತ ಆಪ್ತನಾಗಿ ಶುಶ್ರೂಷೆ ಮಾಡುತ್ತಿದ್ದರು.

ದ್ರವ್ಯಾರ್ಜನೆಯಲ್ಲಿ ನಿರತನಾಗಿರುವ, ತಾಮಸ ಸ್ವಭಾವದವನಾದ ಅಣ್ಣನನ್ನು ತ್ಯಜಿಸಿ, ಸಾತ್ವಿಕನಾದ ತ್ಯಾಗರಾಜರು ತಂದೆಗೆ ತೃಪ್ತಿಯನ್ನು ನೀಡಿದರು.

ಮದಿಸಿದ ರಾವಣನಂತೆ ಸ್ವಭಾವವುಳ್ಳ ಅಣ್ಣನನ್ನು ಉಪೇಕ್ಷಿಸಿ, ಯಾವಾಗಲೂ ರಾಮನನ್ನೇ ಅವಲಂಬಿಸಿರುವ, ವಿಭೀಷಣನಂತಿರುವ ತ್ಯಾಗರಾಜರಲ್ಲಿ ಒಳ್ಳೆಯ ಜನರು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ಅಥಾಸೀಜ್ಜ್ಞಾತು ಜಪ್ಯೇಶಹೃದಯೇ ಮತಿರೀದೃಶೀ ।
ಜಪತಃ ಸರ್ವದಾ ದ್ರವ್ಯಮಹಾಮಂತ್ರಮತಂದ್ರಿತಮ್ ॥ ೧೦ ॥

''ಪಿತುರ್ಮೇ ಗೃಹಮಸ್ತೀದಂ ಷಾಜಿರಾಜ ಸಮರ್ಪಿತಮ್ ।
ಇದಮಪ್ಯಪರಸ್ಮೈ ಮೇ ತಾತೋ ನೂನಂ ಪ್ರದಾಸ್ಯತಿ ॥ ೧೧ ॥

ಕೇನಾಸೌ ನ ಹಿ ಭೂಪೇನ ಮಮನಾದ್ರಿಯತೇ ಪಿತಾ ।
ಕಾ ವಾಸ್ಮೈ ಸಂಪದಸ್ತುಷ್ಟೈರ್ನ ದೀಯಂತೇ ಮುಹುರ್ಮುಹುಃ ॥ ೧೨ ॥

ಅಕಾಲಜ್ಞೋಯಮಜ್ಞಾತ್‌ದ್ರವ್ಯದೌರ್ಲಭ್ಯರಕ್ಷಣಃ ।
ಅವಿವೇಕಿತಯಾ ಹಂತ ತೃಣಾಯ ಮನುತೇ ಧನಮ್ ॥ ೧೩ ॥

ನರೇಂದ್ರೈಃ ಶ್ರೇಷ್ಠಿಭಿರ್ಮಿತ್ರೈರ್ಯದ್ಯದ್ ದತ್ತಂ ಚಿರಾದಪಿ ।
ತತ್ಸರ್ವಂ ಸಂಗೃಹೀತುಂ ಚೇನ್ಮದನ್ಯಃ ಕೋ ಜಗತ್ಪತಿಃ ॥ ೧೪ ॥

ಆತ್ಮಾವೈ ಪುತ್ರನಾಮಾಸೀತ್ಯೇದದ್ವಾಕ್ಯಂ ಕಥಂ ಮೃಷಾ ।
ಯದೇಷ ತ್ಯಾಗರಾಜೋಽಪಿ ಪಿತ್ರರ್ಥೈಕ ಪರಾಯಣಃ ॥ ೧೫ ॥

ಮದ್ಗೌರವೇಣ ಯಂದ್ ದಿಷ್ಟ್ಯಾ ಮನ್ಮಿತ್ರೈರರ್ಪಿತಂ ವಸು ।
ತದಪಿ ತ್ಯಜತಾನೇನ ಸಾರ್ಥನಾಮ್ನಾ ಕುಲಂ ಹತಮ್ ॥ ೧೬ ॥

ಗ್ರಾಹಂ ಗ್ರಾಹಂ ಸುಧೀಃ ಪಶ್ಯೇದಚಿರಾದ್ ಬಹುಸಂಪದಃ ।
ತ್ಯಾಜಂ ತ್ಯಾಜಂ ವಿಮೂಢಸ್ತು ಕಿಂ ನು ಪಶ್ಯತಿ ಭೂತಲೇ ॥ ೧೭ ॥

ಕಣಶಃ ಸಾಧಯನ್ನರ್ಥಂ ನ ಜಾತು ಪರಿಭೂಯತೇ ।
ಬಹುಶೋ ನಾಶಯನ್ನರ್ಥಂ ಕದಾ ಕ್ಷೇಮಮವಾಪ್ನುಯಾತ್ ॥ ೧೮ ॥

ಅರ್ಥಾನಾಂ ವಿಷಯೇ ನಾಂಬಾ ನತಾತೋ ನಾಪಿ ಸೋದರಃ ।
ದಾಕ್ಷಿಣ್ಯಾದ್ ಹನ್ಯತೇ ಶ್ರೇಯೋ ನಿರ್ದಾಕ್ಷಿಣ್ಯಃ ಸುಖೀ ಭವೇತ್ ॥ ೧೯ ॥

ಸ್ವಿನ್ನಫಾಲಃ ಪರಾತ್ಮಾ ನವಾ ಸಂಗೃಹ್ಣಾಮಿ ವಸೂನ್ಯಹಮ್ ।
ರಾಮ ರಾಮೇತ್ಯನಾಯಾಸಂ ಭುಜ್ಯತೇ ತತ್ ಪರೈರ್ಜನೈಃ ॥ ೨೦ ॥

ಅತೋಹಮಚಿರೇಣಾರ್ಥಂ ಪಿತುಃ ಸರ್ವಂ ವಿಭಾಜಯನ್ ।
ಮದ್ಭಾಗಂ ಪೃಥಗಾದಾಯ ಸ್ವತಂತ್ರಃ ಸ್ಯಾಂ ಸದಾ ಸುಖೀ'' ॥ ೨೧ ॥

ಇತಿ ನಿಶ್ಚಿತ್ಯ ಜಪ್ಯೇಶಃ ಕುಪ್ಯನ್ ತಾತಾಯ ಜಾತು ಸಃ ।
ಪಿತ್ರಾರ್ಜಿತಂ ಧನಂ ಸರ್ವಂ ವಿಭೇಜೇ ವಿಷಮಾಧ್ವನಾ ॥ ೨೨ ॥

ಪ್ರತ್ಯಗ್ನಂ ಸಾರವತ್ ಸ್ಥಾಯಿ ಬಹುಮೂಲ್ಯಮನಾಕುಲಮ್ ।
ಸರ್ವಂ ಸ್ವಭಾಗ ಆದಾಯ ಸರ್ವಜ್ಯೇಷ್ಠ್ಯಮದರ್ಶಯತ್ ॥ ೨೩ ॥

ಹಣದ ಮಂತ್ರವನ್ನೇ ಯಾವಾಗಲೂ ಜಪಿಸುವ ಜಪ್ಯೇಶನ ಹೃದಯದಲ್ಲಿ ಈ ರೀತಿಯಾದ ಭಾವನೆಯು ಉಂಟಾಯಿತು :

''ಶಾಜಿರಾಜನು ಕೊಟ್ಟ ಈ ಮನೆಯು ತಂದೆಯದು. ನಿಶ್ಚಯವಾಗಿಯೂ ಇದನ್ನೂ ಸಹ ತಂದೆಯು ಬೇರೆಯವರಿಗೆ ಕೊಡುವುದರಲ್ಲಿ ಸಂದೇಹವಿಲ್ಲ. ನನ್ನ ತಂದೆಯು ಬೇರೆ ಯಾವ ರಾಜನಿಂದ ತಾನೇ ಹೀಗೆ ಗೌರವಕ್ಕೆ ಪಾತ್ರನಾದಾನು ? ಅಥವಾ ಬೇರೆಯವರು ಯಾರು ಪದೇ ಪದೇ ಸಂತೋಷದಿಂದ ಐಶ್ವರ್ಯವನ್ನು ಕೊಡುತ್ತಾರೆ ?

ಈ ನನ್ನ ತಂದೆಯಾದರೋ ಕಾಲಾಕಾಲಗಳ ಮೌಲ್ಯವನ್ನು ಅರಿಯದವನು. ಹಾಗೆಯೇ ಈ ದ್ರವ್ಯವನ್ನು ರಕ್ಷಿಸಲು ಅಸಮರ್ಥನು. ಇವನು ತನ್ನ ಅವಿವೇಕದಿಂದ ಹಣವನ್ನು ತೃಣದ ಸಮಾನ ಭಾವಿಸುತ್ತಾನೆ. ಅಯ್ಯೋ ! ಏನು ಮಾಡುವುದು ?

ರಾಜರುಗಳಿಂದ, ದೊಡ್ಡದೊಡ್ಡ ವರ್ತಕರಿಂದ ಯಾವುದು ಕೊಡಲ್ಪಡುತ್ತದೆಯೋ ಅದು ಬಹಳ ಕಾಲ ಇರುತ್ತದೆ. ಅವೆಲ್ಲವನ್ನೂ ನಾನು ಸಂಗ್ರಹಿಸಿಕೊಂಡರೆ ನನ್ನಂಥ ಜಗತ್ಪತಿಯು ಇನ್ನು ಯಾರುತಾನೇ ಇರಲು ಸಾಧ್ಯ ?

ತಂದೆಯೇ ಮಗನಾಗಿ ಹುಟ್ಟಿರುತ್ತಾನೆ ಎಂಬ ಮಾತು ಸುಳ್ಳಾಗಲು ಸಾಧ್ಯವೇ ? ಹಾಗಾದರೆ ಈ ತ್ಯಾಗರಾಜನು ತಂದೆಯಂತೆಯೇ ನಡವಳಿಕೆಯುಳ್ಳವನಾಗಿದ್ದಾನೆ. ನನ್ನ ಗೌರವದಿಂದ ಯಾವ ಭೂಮಿಯು ನನ್ನ ಮಿತ್ರರಿಂದ ಕೊಡಲ್ಪಟ್ಟಿದೆಯೋ ಅದೂ ಸಹ ಹೆಸರಿಗೆ ತಕ್ಕಂತೆ ನಡೆದುಕೊಳ್ಳುವ ಈ ತ್ಯಾಗರಾಜನಿಂದ ಕೊಡಲ್ಪಟ್ಟು ನಮ್ಮ ಕುಲವೇ ನಾಶವಾಗುತ್ತದೆ.

ಬುದ್ಧಿವಂತರಾದವರು ಬಹಳ ಐಶ್ವರ್ಯವನ್ನು ಸಂಪಾದಿಸಲು ಬಹಳ ಕಾಲದವರೆಗೆ

ಕಷ್ಟಪಡುತ್ತಾರೆ. ಮೂರ್ಖರಾದರೋ ಎಲ್ಲವನ್ನೂ ತ್ಯಜಿಸುತ್ತಾರೆ. ಈ ಭೂಮಿಯಲ್ಲಿ ಐಶ್ವರ್ಯ ಗಳಿಕೆಯೊಂದನ್ನು ಬಿಟ್ಟು ಇನ್ನೇನಿದೆ ?

ಸ್ವಲ್ಪಸ್ವಲ್ಪವಾಗಿ ಐಶ್ವರ್ಯವನ್ನು ಸಂಪಾದಿಸಬೇಕು. ಹೆಚ್ಚಾದ ಐಶ್ವರ್ಯವು ಒಟ್ಟಿಗೆ ದೊರೆಯುವುದಿಲ್ಲ, ಅಲ್ಲವೆ ? ಒಂದು ವೇಳೆ ಐಶ್ವರ್ಯವು ನಾಶವಾಗುತ್ತಾ ಬಂದರೆ ಯಾವಾಗ ಇದರ ಒಳಿತನ್ನು ನೋಡುವುದು ?

ಹಣದ ವಿಷಯದಲ್ಲಿ ನನ್ನ ತಂದೆಯಾಗಲೀ ಅಥವಾ ನನ್ನ ಸೋದರನಾಗಲೀ ಉಪಯುಕ್ತರಲ್ಲ. ದಾಕ್ಷಿಣ್ಯದಿಂದ ಶ್ರೇಯಸ್ಸು ನಾಶವಾಗುತ್ತದೆ. ನಿರ್ದಾಕ್ಷಿಣ್ಯವು ಸುಖವನ್ನು ತಂದುಕೊಡುತ್ತದೆ. ಬೆವರು ಸುರಿಸಿ ಕಷ್ಟಪಟ್ಟು ನಾನು ಐಶ್ವರ್ಯವನ್ನು ಸಂಪಾದಿಸುತ್ತೇನೆ. ಅದನ್ನು ಬೇರೆ ಬೇರೆ ಜನರು ಅನಾಯಾಸವಾಗಿ ರಾಮ ರಾಮ ಎಂದು ಹೇಳಿಕೊಂಡು ಅನುಭವಿಸುತ್ತಾರೆ.

ಆದ್ದರಿಂದ ನಾನು ಅತಿಶೀಘ್ರವಾಗಿ ನನ್ನ ತಂದೆಯ ಸರ್ವಸ್ವವನ್ನೂ ವಿಭಾಗ ಮಾಡಿ, ನನ್ನ ಭಾಗವನ್ನು ತೆಗೆದುಕೊಂಡು, ಸ್ವತಂತ್ರನಾಗಿ, ಯಾವಾಗಲೂ ಸುಖವಾಗಿರುತ್ತೇನೆ.''

ಹೀಗೆ ನಿಶ್ಚಯಿಸಿಕೊಂಡ ಜಪ್ಯೇಶನು ತನ್ನ ತಂದೆಯ ಬಳಿ ಹೋದನು. ತಂದೆಗೆ ಇಷ್ಟವಿಲ್ಲದಿದ್ದರೂ ಪಿತ್ರಾರ್ಜಿತವಾದ ಎಲ್ಲಾ ಐಶ್ವರ್ಯವನ್ನೂ ಅನ್ಯಾಯ ಮಾರ್ಗದಿಂದ (ತನಗೆ ಹೆಚ್ಚು ಭಾಗ, ತಮ್ಮನಿಗೆ ಕಡಿಮೆ ಭಾಗ) ವಿಷಮವಾಗಿ ವಿಭಾಗ ಮಾಡಿದನು. ಅತ್ಯಂತ ಹೆಚ್ಚು ಬೆಲೆಯುಳ್ಳ, ಬಹಳ ದಿನಗಳವರೆಗೆ ಇಟ್ಟುಕೊಳ್ಳಬಹುದಾದ, ಸಾರವತ್ತಾದ ಪ್ರತಿಯೊಂದನ್ನೂ ಭಾಗ ಮಾಡಿಕೊಂಡು ತನ್ನ ಭಾಗವನ್ನು ತೆಗೆದುಕೊಂಡು ತನ್ನ ಜ್ಯೇಷ್ಠತ್ವವನ್ನು ಪ್ರದರ್ಶಿಸಿದನು.

ಅಪ್ಯೈಮತ್ವಾದರೋಪ್ಯತ್ವಾದನೂತ್ನತ್ವಾದ್ಧರೇಸ್ತನುಃ ।
ಅಸಾರೇತ್ಯವಗಂತ್ರಾಹೋ ತತ್ತ್ಯಜೇಽನೇನ ಪಾಪಿನಾ ॥ ೨೪ ॥

ತ್ಯಾಗರಾಜೋ ನಿಜೇ ಭಾಗೇ ಭ್ರಾತ್ರಾ ದತ್ತೇ ಕಥಂಚನ ।
ಸ್ವವಂಶ್ಯೈಃ ಪೂಜಿತಂ ರಮ್ಯಂ ಸೀತಾಲಕ್ಷ್ಮಣಸಂಯುತಮ್ ॥ ೨೫ ॥

ಪಾಪಿಯಾದ ಜಪ್ಯೇಶನು ರಾಮವಿಗ್ರಹವು ಚಿನ್ನದ್ದಲ್ಲವೆಂಬ ಕಾರಣದಿಂದ ಅಸಾರವುಳ್ಳದ್ದೆಂದು ಪರಿಗಣಿಸಿ ಅದನ್ನು ತ್ಯಜಿಸಿದನು. ಅವನಿಗೆ ಅದನ್ನು ಹೊಂದುವ ಯೋಗ್ಯತೆಯೂ ಇರಲಿಲ್ಲ.

ತ್ಯಾಗರಾಜರಾದರೋ ತನಗೆ ಸಹೋದರನಿಂದ ಕೊಡಲ್ಪಟ್ಟ ಅತ್ಯಲ್ಪವಾದ ತನ್ನ ಭಾಗದಲ್ಲಿ, ತನ್ನ ಪೂರ್ವಜರೆಲ್ಲರೂ ಪೂಜಿಸಿದ್ದ ಅತ್ಯಂತ ರಮ್ಯವಾದ ಸೀತಾಲಕ್ಷ್ಮಣ ಸಹಿತವಾದ ಶ್ರೀರಾಮನ ವಿಗ್ರಹದೊಂದಿಗಿದ್ದರು.

ಶ್ರೀರಾಮವಿಗ್ರಹಂ ತ್ವೇಕಂ ಜಗ್ರಾಹೇಷ್ಟವಿಗ್ರಹಮ್ ।
ಗೃಹಸ್ಯಾಂತಿಮಪಾರ್ಶ್ವೇಽಮುಂ ಪ್ರತಿಷ್ಠಾಯ ರಮಾಪತಿಮ್ ॥ ೨೬ ॥

ಉಷಸ್ಯಾಶು ಪ್ರಬುದ್ಧೋಽಯಂ ಸ್ನಾತಃ ಸಹ್ಯಸುತಾಮೃತೇ ।
ಊರ್ಧ್ವಪುಂಡ್ರಲಸದ್ಗಾತ್ರಸ್ತುಲಸೀಮಾಭ್ಯವಂದತ ॥ ೨೭ ॥

ವಿವಾದಕ್ಕೊಳಗಾಗದ ಶ್ರೀರಾಮ ವಿಗ್ರಹವೊಂದನ್ನು ತ್ಯಾಗರಾಜರು ತೆಗೆದುಕೊಂಡು ಮನೆಯ ಕೊನೆಯ ಭಾಗದ ಪಕ್ಕದಲ್ಲಿದ್ದ ಸಣ್ಣ ಸ್ಥಳವೊಂದರಲ್ಲಿ ಅದನ್ನು ಸ್ಥಾಪಿಸಿದರು. ಉಷಃಕಾಲದಲ್ಲೇ ಎದ್ದು ಸ್ನಾನಮಾಡಿ ಪುತ್ರರತ್ನನೊಡನೆ ರಾಮಬ್ರಹ್ಮನು ಊರ್ಧ್ವ ಪುಂಡ್ರವನ್ನು ಹಣೆಗೆ ಹಚ್ಚಿಕೊಂಡು ತುಲಸೀ ಪೂಜೆ ಮಾಡುತ್ತಿದ್ದನು.

ಶ್ರೀರಾಮಂ ಸ್ವಕೃತೈಃ ಪಶ್ಚಾತ್ ಕೀರ್ತನೈರಾರ್ತಿನಾಶಕೈಃ ।
ಭಜನ್ನೇಷ ದ್ವಿಜಶ್ರೇಷ್ಠಃ ಪ್ರಾತಃಕಾಲಮಯಾಪಯಾತ್ ॥ ೨೮ ॥

ತತಃ ಕತಿಪಯಾನ್ ಶಿಷ್ಯಾನ್ ರಾಮಸೇವಾಧುರಂಧರಾನ್ ।
ಸಂಗೀತಂ ಶಾಸ್ತ್ರತತ್ವಂ ಚ ಸ್ಫುಟಮಾಧ್ಯಾಪಯದ್ ಬುಧಃ ॥ ೨೯ ॥

ಮಧ್ಯಾಹ್ನೇ ಸ ಪುನಃ ಸ್ನಾತಃ ಶುಚಿಃ ಶ್ರೀರಾಮವಿಗ್ರಹಮ್ ।
ಉಪಚಾರೈಃ ಸ್ಮೃತಿಪ್ರೋಕ್ತೈರಾರ್ಚತ್ ಷೋಡಶಭಿಃ ಕ್ರಮಾತ್ ॥ ೩೦ ॥

ವಿನೀತಯಾ ತಯಾ ಸ್ನಾತಪೂತಯಾ ಪ್ರಿಯಯಾಽದರಾತ್ ।
ಯತ್ ಸ್ವಾದು ಪಕ್ವಮನ್ನಾದ್ಯಂ ತತ್ ಪರಸ್ಮೈ ನ್ಯವೇದಯತ್ ॥ ೩೧ ॥

ಶ್ರೀರಾಮಾರ್ಪಿತಶೇಷೇಣ ಪ್ರಸಾದೇನ ತತೋಽತಿಥೀನ್ ।
ಸಂತರ್ಪ್ಯ ಪಿತೃತಃ ಶಿಷ್ಟಂ ಸಪತ್ನೀಕಃ ಸ ಆದದೇ ॥ ೩೨ ॥

ಅಪರಾಹ್ಣೇ ಪುರಾಣಾದಿಶ್ರವಣಶ್ರಾವಣಾದಿಭಿಃ ।
ಆನಂದತುಂದಿಲಸ್ವಾಂತಾನತಾನೀದಖಿಲಾನ್ ಜನಾನ್ ॥ ೩೩ ॥

ಸಾಯಂ ಸಂಧ್ಯಾಮುಪಾಸ್ಯಾಯಂ ಸಶಿಷ್ಯಃ ಸಹ್ಯಜಾತಟೇ ।
ಪುಷ್ಯಮಂಟಪಮಧ್ಯಸ್ಥಂ ಶಿವಂ ತುಷ್ಟಾವ ಕೀರ್ತನೈಃ ॥ ೩೪ ॥

ಪ್ರದೋಷೇ ದೋಷಹೀನೋಽಯಮುಪಗಮ್ಯ ಶಿವಾಲಯಮ್ ।
ಅಸ್ತೋಕಮಹಿಮಾಽಸ್ತೌತ್ ತಂ ಪ್ರಣತಾರ್ತಿಹರಮ್ ಹರಮ್ ॥ ೩೫ ॥

ಧರ್ಮಸಂವರ್ಧನೀಂ ದೇವೀಂ ಪ್ರಣಮ್ಯ ಚ ಶಿವಪ್ರಿಯಾಮ್ ।
ದಕ್ಷೋ ದಕ್ಷಿಣ ಕೈಲಾಸೇ ಬ್ರಹ್ಮತತ್ವಂ ವ್ಯಚಾರಯತ್ ॥ ೩೬ ॥

ಅಥಾಗತ್ಯ ನಿಜಂ ಗೇಹಂ ರಾಮಂ ನೀರಾಜನಾದಿಭಿಃ ।
ಸಂತೋಷ್ಯ ಶಾಯಯಿತ್ವಾ ತಂ ನಿಶೋ ನಿನ್ಯೇಽನಿಶಂ ಭಜನ್ ॥ ೩೭ ॥

ಈ ದ್ವಿಜಶ್ರೇಷ್ಠನಾದ ತ್ಯಾಗರಾಜರು ಬೆಳಿಗ್ಗೆ ಎದ್ದು ತನ್ನ ಪ್ರಾತರ್ವಿಧಿಗಳಾದ ನಂತರ ಪಾಪವನ್ನು ಹರಿಸುವ ಕೀರ್ತನೆಗಳಿಂದ ಶ್ರೀರಾಮನನ್ನು ಭಜಿಸಿ, ನಂತರ ರಾಮ

ಸೇವಾ ಧುರೀಣರಾದ ಕೆಲವು ಶಿಷ್ಯರಿಗೆ ಸಂಗೀತಶಾಸ್ತ್ರ ತತ್ತ್ವವನ್ನು ಬೋಧಿಸಿ ಅವರನ್ನು ಪಂಡಿತರನ್ನಾಗಿ ಮಾಡುತ್ತಿದ್ದರು.

ಮಧ್ಯಾಹ್ನದ ಸಮಯದಲ್ಲಿ ಪುನಃ ಸ್ನಾನಮಾಡಿ ಶುಚಿರ್ಭೂತರಾಗಿ ಸ್ಮೃತಿಯಲ್ಲಿ ಹೇಳಿರುವ ಪ್ರಕಾರ ಕ್ರಮವಾಗಿ ಶ್ರೀರಾಮವಿಗ್ರಹಕ್ಕೆ ಷೋಡಶೋಪಚಾರ ಪೂಜೆಯನ್ನು ಮಾಡುತ್ತಿದ್ದರು. ಸ್ನಾನಮಾಡಿ ಪವಿತ್ರಳಾದ ಹಾಗೂ ವಿನೀತಳಾದ ತನ್ನ ಪ್ರಿಯ ಪತ್ನಿಯು ಬಹಳ ಆದರದಿಂದ ತಂದಂಥ ರುಚಿಕರವಾದ ಪಕ್ವಾನ್ನಾದಿಗಳನ್ನು ಆ ಪರಮಾತ್ಮನಿಗೆ ನಿವೇದನೆ ಮಾಡುತ್ತಿದ್ದರು. ಶ್ರೀರಾಮನಿಗೆ ಅರ್ಪಿಸಿದ ನಂತರ ಆ ಪ್ರಸಾದದಿಂದ ಅತಿಥಿಗಳನ್ನು ಹಾಗೂ ತಂದೆಯನ್ನು ಸತ್ಕರಿಸಿ, ನಂತರ ಉಳಿದ ಭಾಗ ವನ್ನು ಪತ್ನಿಯೊಡನೆ ತೆಗೆದುಕೊಳ್ಳುತ್ತಿದ್ದರು.

ಊಟದ ನಂತರ ಪುರಾಣಾದಿಗಳನ್ನು ಓದುವ ಮತ್ತು ಓದಿಸುವ ಕಾರ್ಯಗಳಲ್ಲಿ ತೊಡಗಿ ಎಲ್ಲಾ ಜನರನ್ನೂ ಸಕಲ ರೀತಿಯಿಂದ ಸಂತೋಷಗೊಳ್ಳುವಂತೆ ಮಾಡುತ್ತಿ ದ್ದರು. ಸಹ್ಯಾದ್ರಿಸುತೆಯಾದ ಕಾವೇರಿಯ ದಡದಲ್ಲಿ ತನ್ನ ಶಿಷ್ಯಸಮೇತರಾಗಿ ಸಾಯಂ ಸಂಧ್ಯಾವಂದನೆಯನ್ನು ಮಾಡಿ, ಪುಷ್ಪಮಂಟಪದ ಮಧ್ಯದಲ್ಲಿರುವ ಆ ಶಿವನನ್ನು ತನ್ನ ಕೀರ್ತನೆಗಳಿಂದ ತುಷ್ಟಿಗೊಳಿಸುತ್ತಿದ್ದರು.

ದೋಷರಹಿತರಾದ ಇವರು ಪ್ರದೋಷಕಾಲದಲ್ಲಿಯೇ ಶಿವಾಲಯವನ್ನು ಸೇರಿ ಪಾಪ ನಾಶಕನಾದ ಶಿವನ ಮಹಿಮೆಗಳ ಗುಣಗಾನ ಮಾಡುತ್ತಿದ್ದರು. ಶಿವನಿಗೆ ಪ್ರಿಯಳಾದ ಧರ್ಮಸಂವರ್ಧಿನೀದೇವಿಯನ್ನು ನಮಸ್ಕರಿಸಿ, ಬ್ರಹ್ಮತತ್ತ್ವ ಪ್ರವಚನನಿಪುಣರಾದ ಇವರು ದಕ್ಷಿಣಕೈಲಾಸದಲ್ಲಿ ಬ್ರಹ್ಮತತ್ತ್ವವನ್ನು ಪ್ರಚಾರ ಮಾಡುತ್ತಿದ್ದರು. ಅನಂತರ ತನ್ನ ಮನೆಗೆ ಬಂದು ಮಂಗಳಾರತಿ ಮುಂತಾದವುಗಳಿಂದ ಶ್ರೀರಾಮನನ್ನು ಪೂಜಿಸಿ, ಅವನನ್ನು ಮಲಗಿಸಿ, ರಾತ್ರಿಯೆಲ್ಲಾ ಭಜನೆ ಮಾಡುತ್ತಾ ಕಾಲ ಕಳೆಯುತ್ತಿದ್ದರು.

ವಿಶ್ರಾಂತೇ ಹೀಂದ್ರಿಯಗ್ರಾಮೇ ಚಿತ್ತೇಚ ನಿರುಪದ್ರವೇ ।
ಸುಪ್ತವದ್ ಯುಕ್ತ ಆಸೀನಃ ಪರಂಬ್ರಹ್ಮಹೃದಾಗಮತ್ ॥ ೩೮ ॥

ಏವಂ ಪ್ರತಿದಿನಮ್ ಯಸ್ಯ ಶುಭಾಶ್ಚರ್ಯಾ ವಿರೇಜಿರೇ ।
ಸಂಸಾರೇ ಸಕಥಂ ಮಜ್ಜೇತ್ ಪದ್ಮಪತ್ರಮಿವಾಂಭಸಿ ॥ ೩೯ ॥

ಪುತ್ರಾತ್ ಶತಗುಣಾ ಪುತ್ರೀತ್ಯೇತತ್ ತತ್ತ್ವಂ ಪ್ರಕಾಶಯನ್ ।
ವಿಧಿರಸ್ಮೈ ಶುಭಾಮೇಕಾಮದಾತ್ ಸೀತಾಭಿಧಾಂ ಸುತಾಮ್ ॥ ೪೦ ॥

ಎಲ್ಲಾ ಇಂದ್ರಿಯಗಳೂ ವಿಶ್ರಾಂತಸ್ಥಿತಿಗೆ ಬರಲು, ಮನಸ್ಸು ಉಪದ್ರವವಿಲ್ಲದೆ ಇರಲು, ಪರಬ್ರಹ್ಮನ ಸಾಕ್ಷಾತ್ಕಾರವನ್ನು ಯೋಗಬಲದಿಂದ ಮಾಡಿಕೊಂಡು ಮಲಗಿದ್ದವರಂತೆ ಕಾಣುತ್ತಿದ್ದರು.

ಹೀಗೆ ಪ್ರತಿದಿನವೂ ಯಾರ ಜೀವನದಲ್ಲಿ ಆಶ್ಚರ್ಯಕರವಾದ ಒಳ್ಳೆಯ ಸಂಗತಿಗಳು ನಡೆಯುತ್ತಿದ್ದುವೋ, ಅಂಥವರು ದೈನಂದಿನ ಸಂಸಾರದಲ್ಲಿ ಹೇಗೆ ಮುಳುಗಲು ಸಾಧ್ಯ?

ಅಂದರೆ ಇವರು ತಾವರೆ ಎಲೆಯ ಮೇಲಿನ ನೀರಿನಂತಿದ್ದರು.

ಮಗಳು ಮಗನಿಗಿಂತ ನೂರುಪಾಲು ಗುಣಶಾಲಿ ಎಂಬ ತತ್ತ್ವವನ್ನು ಪ್ರಚಾರ ಮಾಡುತ್ತಾ ಇದ್ದ ಇವರಿಗೆ ಸೀತೆ ಎಂಬ ಹೆಸರಿನ ಶುಭಲಕ್ಷಣಗಳುಳ್ಳ ಮಗಳೊಬ್ಬಳು ಜನಿಸಿದಳು.

> ಧ್ಯಾಯಂ ಧ್ಯಾಯಂ ದಯಾಲುಂ ತ್ರಿಭುವನಶರಣಂ ರಾಮಚಂದ್ರಂ ಸುರೇಂದ್ರಂ
> ಪಾಯಂ ಪಾಯಂ ರಸಜ್ಞೋ ಹರಿಗುಣಗಣ ಸದ್ಗೀತಪೀಯೂಷಸಿಂಧುಮ್ ।
> ಚಾರಂ ಚಾರಂ ಸಂವಂಶ್ಯೈಃ ಶಿವಪದನಿರತೈಃ ಕ್ಷುಣ್ಣವರ್ತ್ಮನ್ಯದುಷ್ಟೇ
> ರಾಜಂ ರಾಜಂ ಸ ರಾಜಾವಲಿವಿನತ ಪದಸ್ತ್ಯಾಗರಾಜೋ ವಿಜಿಗ್ಯೇ ॥ ೪೧ ॥

ಇತಿ 'ಗಾಯಕ ಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತ ವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ತೃತೀಯ ಸರ್ಗಃ

ಮೂರು ಲೋಕಗಳಿಗೆ ಒಡೆಯನಾದ, ಸುರೇಂದ್ರನಾದ ಶ್ರೀರಾಮಚಂದ್ರನನ್ನು ಯಾವಾಗಲೂ ಧ್ಯಾನಿಸುತ್ತಾ, ಸಂಗೀತರಸ ತತ್ತ್ವಜ್ಞನಾಗಿ, ಹರಿಯ ಗುಣಗಳ ಗೀತಾಮೃತವನ್ನು ಸದಾ ಸವಿಯುತ್ತಾ, ಹೀರುತ್ತಾ, ಶಿವನ ಧ್ಯಾನನಿರತನಾಗಿ, ಸನ್ಮಾರ್ಗದಲ್ಲಿಯೇ ತನ್ನ ವಂಶದವರನ್ನು ಅನುಸರಿಸುತ್ತಾ, ರಾಜಶ್ರೇಷ್ಠನಾದ ಶ್ರೀರಾಮನ ಪದತಲಗಳಲ್ಲಿ ತನ್ನನ್ನು ತಾನು ಅರ್ಪಿಸಿಕೊಂಡು ತ್ಯಾಗರಾಜರು ವಿಜೃಂಭಿಸಿದರು.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ಮೂರನೆಯ ಸರ್ಗವು

## ಪದಾರ್ಥ ಚಂದ್ರಿಕಾ

# ಸರ್ಗ ಮೂರು

೧. ಗಾಂ—ಮಾತನ್ನು, ಉಪದೇಶವನ್ನು. ತಾತಃ—ತ್ಯಾಗರಾಜರ ತಂದೆ ರಾಮಬ್ರಹ್ಮ.

೯. ರಾವಣಂ—ರಾವಣನಂತೆ ಇದ್ದ. ಅವನಿಗೆ ತಾದಾತ್ಮ್ಯವನ್ನು ಹೇಳಿರುವುದು ಔಪಚಾರಿಕ. ವಿಭೀಷಣನನ್ನು ಕುರಿತು ಹೀಗೆ 'ಕಾಲಮೋಘಂ ದದರ್ಶ' ಎಂದು ಮುಂತಾಗಿ ಕಾಣುವುದರಿಂದ ತಾದಾತ್ಮ್ಯದಿಂದ ಪ್ರಯೋಗವು ಸಾಧುವಾಗಿದೆ.

೧೩. ದುರ್ಲಭದ ಭಾವ ದೌರ್ಲಭ್ಯ. ದ್ರವ್ಯದ ದೌರ್ಲಭ್ಯವು ಅದರ ರಕ್ಷಣೆಯು ಯಾರಿಂದ ಸಾಧ್ಯವಿಲ್ಲವೋ ಆತನು.

೧೫. ಸಾರ್ಥನಾಮ್ನಾ—ತ್ಯಾಗರಾಜ ಎಂಬ ಸಾರ್ಥಕ ಹೆಸರನ್ನು ಹೊಂದಿದವನಿಂದ.

೧೯. ದಾಕ್ಷಿಣ್ಯಾತ್—ಇತರರ ಅಭಿಪ್ರಾಯವನ್ನು ಅನುಸರಿಸುವುದರಿಂದ.

೨೦. ಸ್ವಿನ್ನಫಾಲಃ—ಹೆಚ್ಚಿನ ಪರಿಶ್ರಮದಿಂದಾಗಿ ಉಂಟಾದ ಬೆವರಿನಿಂದ ಕೂಡಿದ ಹಣೆಯುಳ್ಳವನಃ, ಅಂದರೆ ಅತಿಯಾಗಿ ಶ್ರಮವನ್ನು ವಹಿಸಿ.

೨೨. ವಿಷಮಾಧ್ವನಾ—ತಾಯಿತಂದೆಗಳ ಇಚ್ಛೆಯಿಲ್ಲದೆ, ತನ್ನ ಬಗ್ಗೆ ಹೆಚ್ಚು, ತನ್ನ ತಮ್ಮನ ಬಗ್ಗೆ ಕಡಿಮೆ ಇರುವ ರೀತಿಯಲ್ಲಿರುವ ಅನ್ಯಾಯದ ಮಾರ್ಗದಿಂದ.

೨೪. ಅಹೃಮತ್ವಾತ್ ಮುಂತಾದವು ಕಾರಣಗಳು. ಜಪ್ಯೇಶನು ರಾಮನನ್ನು ಸಾರವಿಲ್ಲವೆಂದೇ ತಿಳಿದುಕೊಂಡು ಬಿಟ್ಟುಬಿಟ್ಟನು. ಅದರ ಸಾರವನ್ನು ತಿಳಿದಿದ್ದ ಪಕ್ಷದಲ್ಲಿ ಆ ಹರಿಯ ಪ್ರತಿಮೆಯನ್ನು ಬಿಡುತ್ತಿರಲಿಲ್ಲ ಎಂದು ಸಾರಾಂಶ. ಅವನು ಪಾಪಿಯಾದ್ದರಿಂದ ಅದನ್ನು ಪಡೆಯಲು ಅವನಿಗೆ ಪುಣ್ಯವಿರಲಿಲ್ಲ ಎಂದು ತತ್ವ.

೨೬. ಅವಿಗ್ರಹಂ—ವಿವಾದವು ಇಲ್ಲದಿರುವ ರೀತಿಯಲ್ಲಿ.

೩೦. ಷೋಡಶೋಪಚಾರಾಃ—ದೇವರ ಪೂಜೆ ಮಾಡುವಾಗ ಹದಿನಾರು ವಿಧ ಉಪಚಾರಗಳು: ಆಸನಂ, ಸ್ವಾಗತಂ, ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸ್ತ್ರ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ.

೩೨. ಪಿತೃತಃ ಶಿಷ್ಟಂ—ತಂದೆಯು ಊಟಮಾಡಿದ ನಂತರ ಉಳಿದುದನ್ನು.

೩೪. ಪುಷ್ಪಮಂಟಪ ಎಂಬ ಹೆಸರಿನ ಒಂದು ಸುಂದರ ಮಂಟಪವು ಕಾವೇರಿ ನದಿಯ ದಡದಲ್ಲಿ ನಿರ್ಮಿಸಲ್ಪಟ್ಟಿದೆ. ಅಲ್ಲಿ ಪುಣ್ಯಕಾಲಗಳಲ್ಲಿ ಪ್ರಣತಾರ್ತಿಹರನಾದ, ಪರಿವಾರ ಸಮೇತನಾದ ಹರನ ಸಮಾಗಮವೂ ತೀರ್ಥಪ್ರದಾನ ವಿತರಣೆಯೂ ವಿಜೃಂಭಣೆಯಿಂದ ನಡೆಯುವುದು.

೩೫. ಪ್ರದೋಷೇ—ಸಂಧ್ಯಾಕಾಲದಲ್ಲಿ. ಆಗ ಶಿವನ ದರ್ಶನವು ವಿಶೇಷತೆಯನ್ನು ಹೊಂದಿದೆ ಎಂದು ಶೈವಾಗಮದಲ್ಲಿದೆ.

೩೬. ದಕ್ಷಃ—ಬ್ರಹ್ಮತತ್ವಪ್ರವಚನ ನಿಪುಣನು. ದಕ್ಷಿಣಕೈಲಾಸ ಎಂಬುದು ಒಂದು ದೇವಾಲಯದ ಹೆಸರು. ಅದನ್ನು ಹಿಂದೆ ವಾಗೀಶಮುನಿಯು ಶಿವನ ಅನುಗ್ರಹದಿಂದ ಕೈಲಾಸ ಪರ್ವತದ ರೀತಿಯಲ್ಲಿ ಭಾವಿಸಿಕೊಂಡು ನೋಡಿದನು ಎಂದು ಸ್ಥಳದ ಇತಿಹಾಸವು ಎಂದು ಕೇಳಿಬರುತ್ತಿದೆ.

೩೮. ಇಂದ್ರಿಯಗ್ರಾಮೋ—ಕಣ್ಣು ಮೊದಲಾದುವು ಸಾಮೂಹಿಕವಾಗಿ ವಿಶ್ರಾಂತಿ ಹೊಂದಿರಲು. ಪರಂಬ್ರಹ್ಮ ಹೃದಾಗಮಃ—ಮನಸ್ಸಿನಲ್ಲಿ ಯೋಗಬಲದಿಂದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಮಾಡುತ್ತ ಇದ್ದನೆಂದು ಅಭಿಪ್ರಾಯ.

೩೯. ತಾವರೆಯ ಎಲೆಯು ನೀರಿನಲ್ಲಿ ಹೇಗೆ ಮುಳುಗಲಾರದೋ ಹಾಗೆಯೇ ಇವನು ಸಂಸಾರದಲ್ಲಿ ಮುಳುಗಲಾರನೆಂದು ಅಂತರಾರ್ಥ.

೪೧. ಪೀಯೂಷಸಿಂಧುಮ್—ಅಮೃತವನ್ನು ಕೊಡುವ ಕ್ಷೀರಸಮುದ್ರದಂತೆ. ಕ್ಷುಣ್ಣೇ ವರ್ತ್ಮನಿ—ಅಭ್ಯಾಸವಾದ ಮಾರ್ಗದಲ್ಲಿ ವಿಜಿಗ್ಯೇ—ಉತ್ಕರ್ಷದಿಂದ ಇದ್ದನು.

ಮಧ್ಯಮೇ ಭುವನೇಽಮುಷ್ಮಿನ್ ಮಹಾಧರ್ಮಾಕೃತಿಕ್ಷಮೇ ।
ಮತಿಮಾನ್ ಶ್ಲಾಘ್ಯತಯೋರ್ಯಂ ತ್ಯಾಗರಾಜೋ ವಿರಾಜಿತ ॥ ೧ ॥

ಏಕೇನ ತ್ಯಾಗರಾಜೇನ ಧುರಿ ಪುತ್ರವತಾಂ ಸ್ಥಿತಃ ।
ಅವಾಪ ಮಹತೀಂ ಕೀರ್ತಿಂ ರಾಮಬ್ರಹ್ಮಾ ಕೃತೀಬಂಧಃ ॥ ೨ ॥

ಪಿತ್ರಾ ಪುತ್ರಾಯ ಕರ್ತವ್ಯಮಿದಮಸ್ತಿ ಮನೀಷಿಣಾ ।
ಯಥಾಽಸೌ ಬುಧ ಸಂಘೇಷು ಪ್ರಥಮ ಸ್ಥಾನಮಾವಹೇತ್ ॥ ೩ ॥

ಪುತ್ರಾದ್ಧಿ ಪಿತುರಾಪ್ತವ್ಯಮಿದಮಸ್ತಿ ವಿವೇಕಿನಃ ।
ಯದೇತತ್ ಪಿತೃತಾಪ್ರಾಪ್ತ್ಯೈ ಕಿಯತ್ ತಪ್ತಮಿತಿಸ್ತುತಿಃ ॥ ೪ ॥

ರಾಘವಃ ಪಿತೃಸೇವಾಸು ಪ್ರಹ್ಲಾದೋ ಹರಿಸೇವನೇ ।
ನಾರದಃ ಕೀರ್ತನೇ ವಿಷ್ಣೋರಭಾಸೀದ್ ಭೂಸುರಾತ್ಮಜಃ ॥ ೫ ॥

ಶ್ರೀರಾಮಭಜನಾಸಕ್ತಮಸಕ್ತಂ ವಿಷಯೇಷ್ವಮುಮ್ ।
ಪಿತರೌ ನಿಜಸೇವಾಯಾಂ ನಾಯಾಸಯಿತುಮೈಚ್ಛತಮ್ ॥ ೬ ॥

ಸಸೇವಾ ನಿರತಸ್ಯಾಸ್ಯ ಸುತಸ್ಯ ಹರಿಪೂಜನೇ ।
ಮಾ ಭೂತ್ ಪ್ರತ್ಯೂಹಲೇಶೋಽಪೀತ್ಯವಧಾರ್ಯೇವ ತತ್ಪಿತಾ ॥ ೭ ॥

ಏನಂ ಷೋಡಶವರ್ಷೀಯಂ ಪ್ರಾಪ್ತಮಾತ್ರ ಸುಯೌವನಮ್ ।
ಮಾತೃದಾರ ಪರಿತ್ರಾಣ ದಕ್ಷಮಕ್ಷರ ಸೇವಿನಮ್ ॥ ೮ ॥

ಸಮರ್ಪ್ಯ ರಾಮಪಾದಾಬ್ಜೇ ಪ್ರಸೃತ್ಯ ಭುವನೇ ಯಶಃ ।
ವಿಸೃಜ್ಯ ಧರಣೌ ದೇಹಂ ಬ್ರಹ್ಮಭೂಯಂ ಗತೋಽಭವತ್ ॥ ೯ ॥

ಶ್ರುತಿ–ಉಕ್ತವಾದ ಅತ್ಯುಚ್ಚ ಫಲಗಳನ್ನು ನೀಡುವ ಯಾಗಾದಿಗಳನ್ನು ಮಾಡಿ ತ್ಯಾಗರಾಜರು ಬುದ್ಧಿವಂತರ ಶ್ಲಾಘನೆಗೆ ಒಳಗಾಗಿ ವಿರಾಜಿಸಿದರು. ಇಂಥ ಒಬ್ಬನೇ ಒಬ್ಬ ತ್ಯಾಗರಾಜರನ್ನು ಪುತ್ರನಾಗಿ ಪಡೆದು ರಾಮಬ್ರಹ್ಮನು ಬುದ್ಧಿವಂತರಿಂದ ಬಹಳ ಕೀರ್ತಿಯನ್ನು ಗಳಿಸಿದನು.

ಬುದ್ಧಿವಂತನಾದ ತಂದೆಯು ಮಗನಿಗೋಸ್ಕರ ಮಾಡುವ ಕರ್ತವ್ಯವು ಇದು. ಹೇಗೆ ಈ ತ್ಯಾಗರಾಜರು ಬುದ್ಧಿವಂತರಲ್ಲಿ ಮೊದಲ ಸ್ಥಾನವನ್ನು ಪಡೆದರೋ ಹಾಗೆ ಎಲ್ಲ ಜನರೂ ತಮ್ಮ ಮಕ್ಕಳು ಇಂತಹ ಸ್ಥಿತಿಗೆ ಬರುವಂತೆ ಮಾಡಬೇಕು.

ತಂದೆಯಾದವನು ಮಕ್ಕಳಿಗೋಸ್ಕರ ಮಾಡುವ ಕೆಲಸವು ಇದು ಎಂದು ವಿವೇಕಿಗಳು ಹೇಳುತ್ತಾರೆ. ರಾಮಬ್ರಹ್ಮನ ಹಾಗೆ ತಂದೆಯ ಸ್ಥಾನವನ್ನು ಪಡೆಯಲು ಎಷ್ಟು ಕಷ್ಟ ಪಡಬೇಕು, ರಾಮಬ್ರಹ್ಮನು ಎಷ್ಟು ಕಷ್ಟವನ್ನು ಅನುಭವಿಸಿದನು ಎಂದರೆ, ಶ್ರೀರಾಮನು ತನ್ನ ತಂದೆಯ ಸೇವೆಯಲ್ಲಿ, ಪ್ರಹ್ಲಾದನು ಹರಿಯ ಸೇವೆಯಲ್ಲಿ, ನಾರದನು ವಿಷ್ಣುವಿನ ಕೀರ್ತನೆಯಲ್ಲಿ ಎಷ್ಟು ತೊಂದರೆಗಳನ್ನು ಸಹಿಸಿದರೋ ಅಷ್ಟು ತೊಂದರೆಗಳನ್ನು ಈ ರಾಮಬ್ರಹ್ಮನು ಅನುಭವಿಸಿದನು.

ಐಹಿಕ ಸುಖಗಳಲ್ಲಿ ಆಸೆಯಿಲ್ಲದೆ, ಶ್ರೀರಾಮನ ಭಜನೆಯಲ್ಲಿ ಯಾವಾಗಲೂ ತೊಡಗಿದ್ದ, ತಂದೆತಾಯಿಯರ ಸೇವೆಯಲ್ಲಿ ನಿರತನಾಗಿದ್ದ ಮಗನ ಹರಿಪೂಜೆಯಲ್ಲಿ ಒಂದು ಸಣ್ಣ ಲೋಪವೂ ಆಗಲಾರದು ಎಂದು ತಿಳಿದ ರಾಮಬ್ರಹ್ಮನು ಅವನನ್ನು ಆಯಾಸ ಪಡಿಸಲು ಇಚ್ಛಿಸಲಿಲ್ಲ.

ಹದಿನಾರು ವರ್ಷದ ಯುವಕನಾದ ತ್ಯಾಗರಾಜರನ್ನು ಬ್ರಹ್ಮೋಪಾಸನೆ ಹಾಗೂ ತಾಯಿ ಮತ್ತು ಪತ್ನಿಯನ್ನು ನೋಡಿಕೊಳ್ಳುವ ಸಮರ್ಥನನ್ನಾಗಿ ಮಾಡಿದ್ದನು. ಇಂತಹ ವೇಳೆಯಲ್ಲಿ ತನ್ನ ಕೀರ್ತಿಯನ್ನು ಎಲ್ಲಾ ಕಡೆ ಹಬ್ಬಿಸಿ, ಶ್ರೀರಾಮನ ಪಾದಾರವಿಂದವನ್ನು ಸೇರಿದನು.

ಅತಃ ಕತಿಪಯೈರ್ಮಾಸೈಃ ಸ್ವಭರ್ತೃವಿರಹಾಕುಲಾ ।
ಕೃತಕೃತ್ಯಾ ಚ ಸಾ ಶಾಂತಾ ಶಾಂತಾಽಭೂದ್ ಭವಬಂಧನಾತ್ ॥ ೧೦ ॥

ಸಂಸಾರಾತ್ ದುಸ್ತರಾದಸ್ಮಾತ್ ಸಜ್ಜನಾನುದ್ದಿಧೀರ್ಷವಃ ।
ಜಾಯಂತೇಽಥ ಕೃತೇ ಕೃತ್ಯೇ ತಿರೋದಧತಿ ದೇವತಾಃ ॥ ೧೧ ॥

ಜಪ್ಯೇಶಸ್ಯಾನುಜಃ ಪಿತ್ರೋರ್ನಿರ್ವಾಪವಿಧಿದೀಕ್ಷಿತಃ ।
ಪಿತರೌ ಪಿತೃವರ್ಗೇಷು ಸಂಯೋಜ್ಯಾಬ್ದಾನತರ್ಪಯನ್ ॥ ೧೨ ॥

ಸ ಪೃಥಕ್ ತ್ಯಾಗರಾಜಸ್ತು ರಾಮಚಂದ್ರೋಪಶೋಭಿತೇ ।
ಭವನೇ ಕುತ್ರಚಿತ್ ಸತ್ಯಾ ಸಾಕಂ ಕಾಲಮಯಾಪಯತ್ ॥ ೧೩ ॥

ಇದಾದ ಕೆಲವು ತಿಂಗಳುಗಳಲ್ಲೇ ತನ್ನ ಪತಿಯ ಅಗಲಿಕೆಯಿಂದಾದ ದುಃಖದಿಂದ, ಈ ಸಂಸಾರಬಂಧದಿಂದ ಕಳಚಿಕೊಳ್ಳಲು ಆ ಶಾಂತೆಯು ಶಾಂತಳಾದಳು. ಅರ್ಥಾತ್, ದೇಹತ್ಯಾಗ ಮಾಡಿದಳು. ಸಜ್ಜನರನ್ನು ಉದ್ಧಾರ ಮಾಡಲು, ಈ ಸಂಸಾರಸಾಗರದಿಂದ ಮುಕ್ತಗೊಳಿಸುವುದಕ್ಕೋಸ್ಕರ ದೇವತೆಗಳ ಅಂಶಗಳೇ ಈ ದಂಪತಿಗಳಾಗಿ ಹುಟ್ಟಿಬಂದರೆಂದು ಕಾಣುತ್ತದೆ.

ಜಪ್ಯೇಶನ ತಮ್ಮನಾದ ಈ ತ್ಯಾಗರಾಜರು ಪಿತೃಕಾರ್ಯಗಳನ್ನು ನಿರ್ವಹಿಸಲು ದೀಕ್ಷಾಬದ್ಧರಾಗಿ, ತರ್ಪಣ ಮುಂತಾದ ಕ್ರಿಯೆಗಳಿಂದ ತಂದೆತಾಯಿಯರನ್ನು ಪಿತೃವರ್ಗಕ್ಕೆ ಸೇರಿಸಿದರು. ಶ್ರೀರಾಮಚಂದ್ರಮೂರ್ತಿಯ ವಿಗ್ರಹದೊಡನೆ ಶೋಭಿಸುತ್ತಾ ಆ ತ್ಯಾಗರಾಜರು ಒಂದು ಮನೆಯಲ್ಲಿ ತನ್ನ ಪತ್ನಿಯೊಡನೆ ಕಾಲಯಾಪನೆ ಮಾಡುತ್ತಿದ್ದರು.

ಕದಾಚಿತ್ ಕರುಣಾಸಿಂಧುಃ ಕಾಂಚೀಪುರೆ ವಿಭೂಷಣಮ್ ।
ಕಶ್ಚಿತ್ ವಿಪಶ್ಚಿದಾಗತ್ಯ ತ್ಯಾಗರಾಜಂ ತಮಾನಮತ್ ॥ ೧೪ ॥

ಅದೃಷ್ಟಪೂರ್ವಮಾತ್ಮಾನಮಾದರೇಣ ಪ್ರೇಕ್ಷಮಾಣಮ್ ।
ತಂ ದಿವ್ಯಮಹಿಮೋಪೇತಂ ವೀತಕಾಮಮಚೋದಯತ್ ॥ ೧೫ ॥

ಭಗವನ್ ಪರಯಾ ಪ್ರೀತ್ಯಾ ಮಂದಭಾಗ್ಯಸ್ಯ ಮೇ ಗೃಹಮ್ ।
ಪಾವಯನ್ ಸ್ವಯಮಾಯಾತಃ ಕಃ ಸ್ಯಾದಂತೋ ಮಹೇಶ್ವರಾತ್ ॥ ೧೬ ॥

ಸೌಮ್ಯಾಸು ಸದಯಂ ಬ್ರೂಹಿ ಪ್ರೇಪ್ಸಿತಂ ತೇ ಜಿತೇಂದ್ರಿಯ ।
ಶ್ರೀರಾಮಭಕ್ತದಾಸೇನ ಮಯಾ ಶಕ್ಯಂ ವಿಧೀಯತಾಮ್ ॥ ೧೭ ॥

ಮಹತಾಂ ಭವತಾಮಾಜ್ಞಾಂ ಶ್ರೀರಾಮಕರುಣಾಬಲಾತ್ ।
ಕಥಂಚಿದಾಶು ಸಂಪೂರ್ಯ ಕೃತಕೃತ್ಯೋ ಭವಾಮ್ಯಹಮ್ ॥ ೧೮ ॥

ಇತಿ ತಚ್ಚರಣಾಂಭೋಜೇ ಪ್ರಣಮ್ಯ ವಿನಯಾನ್ಮುಹುಃ ।
ಪ್ರಾರ್ಥಿನಂ ಸಾರ್ಥಜನ್ಮಾನಂ ತಮಾಚಷ್ಟ ನತೇಷ್ಟದಃ ॥ ೧೯ ॥

ಒಂದು ಸಲ ಕಾಂಚೀಪುರಕ್ಕೆ ಭೂಷಣಪ್ರಾಯನಾದ, ಕರುಣಾಮಯಿಯಾದ ಒಬ್ಬ ಮಹಿಮಾನ್ವಿತನು ಬಂದು ಆ ತ್ಯಾಗರಾಜರಿಗೆ ವಂದಿಸಿದನು. ದಿವ್ಯಪುರುಷನೂ, ಮಹಿಮಾನ್ವಿತನೂ, ಕಾಮಗಳನ್ನು ಗೆದ್ದಿರುವವನೂ, ತಾನು ಹಿಂದೆ ನೋಡಿಲ್ಲದ ಅವನನ್ನು ನೋಡಿದ ತ್ಯಾಗರಾಜರಿಗೆ ಹೀಗೆ ಪ್ರಚೋದನೆಯಾಯಿತು--

'ಬಹಳ ಪ್ರೀತಿಯಿಂದ ಭಗವಂತನು ತಾನೇ ಸ್ವತಃ ಮಂದಭಾಗ್ಯನಾದ ನನ್ನ ಮನೆಯನ್ನು ಪಾವನಗೊಳಿಸಲು ತಾನೇ ಬಂದಿದ್ದಾನೆ ; ಮಹೇಶ್ವರನಲ್ಲದೆ ಇವನು ಇನ್ನು ಯಾರು ತಾನೇ ಆಗಿರಲು ಸಾಧ್ಯ?'

ಹೀಗೆ ಯೋಚಿಸಿ, ''ಎಲೈ ಸೌಮ್ಯನೇ, ಜಿತೇಂದ್ರಿಯನೇ, ನಿನ್ನ ಇಷ್ಟವನ್ನು ದಯವಿಟ್ಟು ತಿಳಿಸು. ಶ್ರೀರಾಮಭಕ್ತದಾಸನಾದ ನನ್ನಿಂದ ಸಾಧ್ಯವಾಗಬಹುದಾದ್ದನ್ನು ಆಜ್ಞಾಪಿಸು. ಹಿರಿಯನಾದ ನಿನ್ನ ಆಜ್ಞೆಯನ್ನು ಶ್ರೀರಾಮನ ಕರುಣಾಕಟಾಕ್ಷದಿಂದ ಸ್ವಲ್ಪಮಟ್ಟಿಗಾದರೂ ಪಾಲಿಸಿ ನಾನು ಕೃತಕೃತ್ಯನಾಗುವೆನು.''

ಈ ರೀತಿ ಹೇಳಿ, ವಿನಯಪೂರ್ವಕವಾಗಿ ಮತ್ತೆ ಅವನ ಚರಣಗಳಲ್ಲಿ ನಮಿಸಿ, ತನ್ನ ಜನ್ಮವನ್ನು ಸಾರ್ಥಕಗೊಳಿಸಬೇಕೆಂದು ಪ್ರಾರ್ಥಿಸಿ ನಮಸ್ಕರಿಸಿದ ತ್ಯಾಗರಾಜರಿಗೆ ಆ ಬ್ರಾಹ್ಮಣನು ಹೀಗೆ ಹೇಳಿದನು—

ಅಯಿ ಭದ್ರ ! ವಿರಕ್ತೋऽಹಂ ತುರೀಯಾಶ್ರಮ ಸಂಸ್ಥಿತಃ ।
ಪ್ರಾಪ್ತವ್ಯಂ ನಾಸ್ತಿ ಮೇ ಕಿಂಚಿತ್ ತ್ರಿಲೋಕ್ಯಾಂ ಬ್ರಹ್ಮದೃಶ್ವನಃ ॥ ೨೦ ॥

ಅಥಾಪಿ ಬ್ರಹ್ಮದೇವೇನ ಚೋದಿತೋಽಹಂ ದಯಾಲುನಾ ।
ಭೂಯಃ ಶ್ರೇಯಃ ಪ್ರದಾತುಂ ತೇ ಸಮೀಪಂ ತು ಸಮಾಗಮಮ್ ॥ ೨೧ ॥

ಆರಾಧ್ಯ ಪಾರ್ವತೀನಾಥಂ ಭೂಯಸಾ ತಪಸಾ ಚಿರಮ್ ।
ತನ್ಮುಖಾಬ್ಜಾನ್ಮಯಾ ಪ್ರಾಪಿ 'ತಾರಕಂ' ಭವತಾರಕಮ್ । ॥ ೨೨ ॥

ಇಮಂ ಮಂತ್ರಮಹಂ ಜಪ್ತ್ವಾ ಶತಂ ಕೋಟೀಃ ಸುಸಿದ್ಧಿಭಾಕ್ ।
ಶುದ್ಧಾಯ ಪಕ್ವಚಿತ್ತಾಯ ತುಭ್ಯಂ ಚೋಪದಿಶಾಮ್ಯಹಮ್ ॥ ೨೩ ॥

ಸದಯಂ ಹೃದಯೇ ರಾಮಂ ಧ್ಯಾಯನ್ ಆಯಂತ್ರಿತೇಂದ್ರಿಯಃ ।
ಜಪೇಃ ಷಣ್ಣವತಿಂ ಕೋಟೀರಿಮಂ ಮಂತ್ರಮತಂದ್ರಿತಃ ॥ ೨೪ ॥

ಅಣಿಮಾದ್ಯಷ್ಟಸಿದ್ಧೀನಾಂ ಪ್ರಾಪಕಂ ಪಾಪಹಾಪಕಮ್ ।
ಪರಸ್ಯ ಬ್ರಹ್ಮಣಃ ಸಾಕ್ಷಾತ್ಕಾರತನ್ಮಯತಾಪ್ರದಮ್ ॥ ೨೫ ॥

ಅಷ್ಟಾಕ್ಷರೀ ಹರೇಃ ಪುಣ್ಯಾ ಶಿವಪಂಚಾಕ್ಷರೀ ತಥಾ ।
ಮಂತ್ರಾಂತರಾಣೀ ಯತ್ಪಾರ್ಶ್ವೇ ಸೂರ್ಯೇ ಹಿಮಕಣಾ ಇವ ॥ ೨೬ ॥

ಬಹುನಾsಥ ಕಿಮುಕ್ತೇನ ಯದ್ಯದಿಚ್ಛಸಿ ವೈಭವಮ್ ।
ತತ್ಸರ್ವಂ ರಾಮಮಂತ್ರೇಣ ಪ್ರಾಪ್ನುಯಾಸ್ತ್ವಂ ನ ಸಂಶಯಃ ॥ ೨೭ ॥

ಇತ್ಯುಕ್ತ್ವಾ ರಾಮಭಕ್ತೋsಯಮಿಮಂ ಶುಭಂ ಮಂತ್ರಂ ಮಹಾತ್ಮನೇ ।
ಶ್ರುತ್ಯುಕ್ತ ಧರ್ಮದಕ್ಷಾಯ ಶ್ರುತ್ಯುಕ್ತ್ಯೋಪದಿದೇಶ ಸಃ ॥ ೨೮ ॥

"ಎಲೈ ಮಂಗಳಕರನೇ ! ನಾನು ವಿರಕ್ತನಾಗಿ ನಾಲ್ಕನೆಯ ಆಶ್ರಮವಾದ ಸಂನ್ಯಾಸವನ್ನು ಆಶ್ರಯಿಸಿರುವೆನು. ಮೂರು ಲೋಕಗಳಲ್ಲಿ ಬ್ರಹ್ಮನನ್ನು ಕಾಣುವ ನನಗೆ ಪಡೆಯಬೇಕಾದುದು ಯಾವುದೂ ಇಲ್ಲ. ಆದರೂ ದಯಾಳುವಾದ ಬ್ರಹ್ಮದೇವನಿಂದ ಆಜ್ಞಪ್ತನಾಗಿ ನಿನ್ನ ಶ್ರೇಯಸ್ಸನ್ನು ಕೋರಲು ನಿನ್ನ ಸಮೀಪಕ್ಕೆ ಬಂದಿರುವೆನು. ಪಾರ್ವತೀಪತಿಯನ್ನು ಕುರಿತು ಬಹಳ ಪ್ರಕಾರವಾಗಿ ಪೂಜೆ ಮಾಡಿ, ಬಹಳ ಕಾಲ ತಪಸ್ಸು ಮಾಡಿ, ಅವನ ಮುಖಾರವಿಂದದಿಂದ ಈ ಸಂಸಾರಸಾಗರವನ್ನು ದಾಟುವ ರಾಮ ರಾಮ ಎನ್ನುವ ತಾರಕವನ್ನು ಪಡೆದಿದ್ದೇನೆ.

ಈ ಮಂತ್ರವನ್ನು ನಾನು ನೂರು ಕೋಟಿ ಸಲ ಜಪಿಸಿ ಸಿದ್ಧಿಯನ್ನು ಪಡೆದಿದ್ದೇನೆ. ಶುದ್ಧವಾಗಿರುವ, ಪಕ್ವವಾದ ಮನಸ್ಸನ್ನು ಪಡೆದಿರುವ ನಿನಗೆ ಈ ತಾರಕನಾಮವನ್ನು ಉಪದೇಶಿಸುವೆನು. ಹೃದಯದಲ್ಲಿ ಶ್ರೀರಾಮನನ್ನು ಧ್ಯಾನಿಸುತ್ತಾ, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡು, ಆಲಸ್ಯವಿಲ್ಲದೆ ೯೬ ಕೋಟಿ ಸಲ ಈ ರಾಮಮಂತ್ರವನ್ನು ಜಪಿಸಬೇಕು. ಪಾಪವನ್ನು ಹರಿಸುವ ಈ ಮಂತ್ರವು ಅಣಿಮಾದಿ ಅಷ್ಟಸಿದ್ಧಿಗಳನ್ನು ತಂದುಕೊಡುತ್ತದೆ. ತಲ್ಲೀನತೆಯಿಂದ ಈ ಮಂತ್ರಜಪದಲ್ಲಿ ಮುಳುಗಿದರೆ, ಅಂಥವರಿಗೆ ಪರಬ್ರಹ್ಮನ ಸಾಕ್ಷಾತ್ಕಾರವಾಗುತ್ತದೆ. ಹರಿಯ ಅಷ್ಟಾಕ್ಷರಿ ಜಪ, ಹರನ ಪಂಚಾಕ್ಷರಿ ಜಪ, ಹಾಗೆಯೇ ಉಳಿದ ಜಪಗಳು ಯಾವ ಮಂತ್ರದ ಪಕ್ಕದಲ್ಲಿ ಸೂರ್ಯನ ಸಮೀಪಕ್ಕೆ

ಬರುವ ಹಿಮದ ಕಣದಂತೆ ಆಗುತ್ತದೋ, ಅಂತಹ ಮಂತ್ರ ಇದು. ಈ ಮಂತ್ರದ ವೈಭವವನ್ನು ಹೆಚ್ಚಿಗೆ ಹೇಳುವುದು ಇನ್ನೇನಿದೆ ! ನೀನು ಸಂಶಯವಿಲ್ಲದೆ ಈ ಮಂತ್ರದ ಮಹಿಮೆಯಿಂದ ಎಲ್ಲ ರೀತಿಯ ಫಲಗಳನ್ನೂ ಹೊಂದುವೆ.''

ಹೀಗೆಂದು ಹೇಳಿ, ರಾಮಭಕ್ತನೂ, ಮಹಾತ್ಮನೂ ಆದ, ವೇದೋಕ್ತ ಧರ್ಮಗಳನ್ನು ಆಚರಿಸುವ ತ್ಯಾಗರಾಜರಿಗೆ ವೇದೋಕ್ತಪ್ರಕಾರವಾಗಿ ಅವನು ಆ ಮಂತ್ರವನ್ನು ಉಪದೇಶಿಸಿದನು.

ಕ್ಷಣೇನ ವಿರತೇ ತಸ್ಮಿನ್ ದ್ವಿಜವರ್ಯೇ ತಿರೋಹಿತೇ ।
ತಂ ಕಂಚಿದಂಚನೀಯಾಂಘ್ರಿಂ ದೇವವರ್ಯಂ ವಿಚಿಂತ್ಯಸಃ ॥ ೨೯ ॥

ತಂ ಮನುಂ ಮನುಜಾದರ್ಶಃ ಪ್ರತ್ಯಹಂ ಶ್ರದ್ಧಯಾನತಃ ।
ಸಪಾದಲಕ್ಷಮಾವೃತ್ತೀ ರಾಮನಾಮ್ನಾಂ ರಹೋsಜಪತ್ ॥ ೩೦ ॥

ಶ್ರೀರಾಮ ಸನ್ನಿಧಾವೇವಂ ಜಾಪಂ ಜಾಪಮಿಮಂ ಮನುಮ್ ।
ಸಮಾಭಿಃ ಪಂಚಾಭಿಃ ಸೋsಸ್ಯ ಸಮಾಂ ಸಂಖ್ಯಾಂ ಸಮಾಪಯತ್ ॥ ೩೧ ॥

ಸಮಾಪ್ತಿದಿವಸೇ ತಸ್ಮಿನ್ ಸ ಮಾಧವಕೃಪಾತುರಃ ।
ಸಮಾಹಿತಮನಾ ರಾಮಂ ಭಜನ್ ಬಹ್ವೀಃ ಸ್ತುತೀರ್ಜಗೌಃ ॥ ೩೨ ॥

ಕ್ಷಣಮಾತ್ರದಲ್ಲಿ ರಾಮಮಂತ್ರದಲ್ಲಿ ತಲ್ಲೀನನಾಗಿ ಆ ಬ್ರಾಹ್ಮಣಶ್ರೇಷ್ಠನು ಅದೃಶ್ಯನಾದನು. ತ್ಯಾಗರಾಜರು ದೇವಸಮಾನನಾದ ಆ ಮಂತ್ರೋಪದೇಶ ಮಾಡಿದವನ ಪೂಜನೀಯ ಚರಣಗಳನ್ನು ಸ್ಮರಿಸಿದರು. ಮನುಷ್ಯರು ಧರ್ಮಾಚರಣೆಯಲ್ಲಿ ಆದರ್ಶಭೂತವಾಗಿ ಜಪಿಸಬಹುದಾದ ಆ ಮಂತ್ರವನ್ನು ಬಹಳ ಶ್ರದ್ಧೆಯಿಂದ ಪ್ರತಿದಿನವೂ ಒಂದೂಕಾಲು ಲಕ್ಷದಂತೆ ತಪ್ಪದೆ ಜಪಿಸಿದರು. ಹೀಗೆ ಜಪಿಸುತ್ತಾ ಶ್ರೀರಾಮ ಮಂತ್ರಜಪವನ್ನು ಪೂರೈಸಿದರು. (ದಿನವೊಂದಕ್ಕೆ ೧,೨೫,೦೦೦ ಮಂತ್ರದಂತೆ ೫ ವರ್ಷಕ್ಕೆ ೨೨,೮೧,೨೫,೦೦೦ ; ೯೬ ಕೋಟಿ ಮಂತ್ರಜಪಕ್ಕೆ ೨೧ ವರ್ಷಗಳು ಬೇಕು.)

ಮಾಧವನ ಕೃಪೆಯನ್ನು ಆದಷ್ಟು ಶೀಘ್ರವಾಗಿ ಪಡೆಯಲು ಇಚ್ಛಿಸಿದ ತ್ಯಾಗರಾಜರು ಮಂತ್ರಜಪದ ಕೊನೆಯ ದಿನ ರಾಮನಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿ ಬಹಳ ಪ್ರಕಾರವಾಗಿ ಸ್ತೋತ್ರ ಮಾಡಿದರು.

ಅನನ್ಯಮಾನಸೇ ತಸ್ಮಿನ್ ರಾಮದರ್ಶನದೀಕ್ಷಿತೇ ।
ಕಥಂ ಸ ಕರುಣಾಸಿಂಧೂ ರಾಘವೋ ನ ಪ್ರಸೀದತಿ ॥ ೩೩ ॥

ಕ್ಷಣೇನ ಕೇನಚಿತ್ ತಸ್ಯ ಗೃಹದ್ವಾರಮತಾಡ್ಯತ ।
ತಚ್ಛ್ರುತ್ವಾ ತಸ್ಸತೀ ದ್ವಾರಮುದ್ಘಾಟ್ಯಾಸು ದದರ್ಶಸಾ ॥ ೩೪ ॥

ತದಾ ದಾಶರಥಿಃ ಶ್ರೀಮಾನ್ ಜಾನಕೀಲಕ್ಷ್ಮಣಾವೃತಃ ।
ಹನೂಮತ್ಸೇವ್ಯಪಾದಾಬ್ಜೋ ನೀಲಮೇಘಜಯಿಪ್ರಭಃ ॥ ೩೫ ॥

ೀದಂಡಮಂಡಿತಾಹೀಶಕರಃ ಸದಭಯಪ್ರದಃ ।
ರ್ಶನಿಜಸೌಂದರ್ಯಶ್ಚಿರೇಣಾಪಿ ತಪಸ್ವಿಭಿಃ ॥ ೩೬ ॥
ಜಾಕ್ಷೋ ನಿರಾಲೇಪೋ ದಂಪತಿಭ್ಯಾಂ ದೃಶಾ ಪಪೇ ।
ನೀಂ ತು ತದಾನೀತ ಸಾರ್ಥಕ್ಯಾಕ್ಷಿಮತೋರ್ದ್ವಯೋಃ ॥ ೩೭ ॥

ದರ್ಶನದೀಕ್ಷಾ ಬದ್ಧನಾಗಿ, ಎಡೆಬಿಡದೆ ಯಾವಾಗಲೂ ರಾಮನನ್ನೇ ಆ ತ್ಯಾಗರಾಜರಿಗೆ ಕರುಣಾಸಾಗರನಾದ ಆ ರಾಘವನು ಹೇಗೆತಾನೇ ರಲು ಸಾಧ್ಯ ?

ೋ ಬಾಗಿಲು ತಟ್ಟಿದಂತಾಯಿತು. ಅದನ್ನು ಕೇಳಿದ ಸಾಧ್ವೀಮಣಿಯಾದ ರ್ಮಪತ್ನಿಯು ಬಾಗಿಲನ್ನು ತೆರೆದು ನೋಡಿದಳು.

ಮೇಘಶ್ಯಾಮನಾದ, ಸೀತಾಲಕ್ಷ್ಮಣಸಹಿತ ಹನುಮಂತನಿಂದ ಸೇವಿಸಲ್ಪ ಂಡಪಾಣಿಯಾದ, ಸತ್ಪುರುಷರಿಗೆ ಅಭಯ ನೀಡುವ, ಸರ್ಪರಾಜನ ಹೆಡೆ ದ ಕೈಯುಳ್ಳ, ಬಹುಕಾಲ ತಪಸ್ಸು ಮಾಡುವ ತಪಸ್ವಿಗಳಿಗೂ ದರ್ಶನ ಸಿಕ್ಕುವುದು ಕಷ್ಟವಾಗಿರುವ ಶ್ರೀರಾಮದರ್ಶನವು ಆ ದಂಪತಿಗಳಿಗೆ ದೊರೆ ಪಾಪಗಳ ವಿಕಾರರಹಿತವಾಗಿರುವ, ಕಮಲನಯನಗಳ ಸುಂದರ ರಸದೌತಣ ಪತಿಗಳಿಗೆ ಶ್ರೀರಾಮಚಂದ್ರನು ಕರುಣಿಸಿದನು. ಆಗ ಆ ದಂಪತಿಗಳ ಕಣ್ಣು ಪಡೆದುವು.

ಾರತೋಷವಾರಾಶಿಃ ಪ್ರಾವಹತ್ ಸ್ತವಕೈತವಾತ್ ।
ತಾಮಣಿಂ ಯಥಾದೀನೋ ಜನ್ಮಾಂಧೋಽಪಿ ಯಥಾಪಟು ॥ ೩೮ ॥

ಮುಕ್ಷುಶ್ಚ ಯಥಾಜ್ಞಾನಂ ತಥೈಷೋಽಮುಮವಾಪ್ತವಾನ್ ।
ದೇವಂ ಭಕ್ತಿಸಂತುಷ್ಟಂ ಕುಟಿಲಾಶ್ರಮಮಾಗತಮ್ ॥ ೩೯ ॥

ಂದೃಷ್ಟ್ವಾಽಪ್ಯಯಂ ಪೀತ್ವಾಽನಂದತುಂದಿಲಮಾನಸಃ ।
ಮಾತ್ರನಿಪೀತಂ ತದ್ ರಾಮಣೀಯಕಮೀಶಿತುಃ ॥ ೪೦ ॥

ಾರ್ಣ ಹೃದಯಂ ಗೀತಿಚ್ಛಲಾದಸ್ಯ ಮುಖಾದ್ ಯಯೌ ।
ರಾಮಸ್ತೇನ ಸಂದಷ್ಟಶ್ಚಿರಾಯ ಪರಿತೋಷಕಃ ॥ ೪೧ ॥

ುಪತ್ನ್ಯತ ಯದ್ಯಾಶು ನ ತಿರೋಽಧಾಸ್ಯತ ಪ್ರಭುಃ ।
ರಾಮದರ್ಶನಾಪ್ನೋದ ಪ್ರವಾಹಸ್ತಾದೃಶೋ ಭೃಶಮ್ ॥ ೪೨ ॥

ಕೊಂಡಾಡುವುದರಿಂದ ಅಪಾರವಾದ ಸಂತೋಷಸಾಗರವು ಪ್ರವಹಿಸಿದ. ರ್ಯವನ್ನು ನೀಡಿದರೆ ಎಷ್ಟು ಸಂತೋಷವಾಗುವುದೋ, ಹುಟ್ಟುಕುರುಡ ುವ ಕಣ್ಣು ಬಂದರೆ ಎಷ್ಟು ಸಂತೋಷವಾಗುವುದೋ ಅಷ್ಟು ಸಂತೋಷ ಂದು ತ್ಯಾಗರಾಜರು ಭಾವಿಸಿದರು.

ಮುಕ್ತಿಯನ್ನು ಅಪೇಕ್ಷಿಸುವವನಿಗೆ ಜ್ಞಾನ ದೊರೆತರೆ ಎಷ್ಟು ಸಂತೋಷವಾಗುವುದೋ ಅಷ್ಟು ಸಂತೋಷವನ್ನು ಶ್ರೀರಾಮನ ದರ್ಶನದಿಂದ ಪಡೆದ ತ್ಯಾಗರಾಜರು ಆ ದೇವನನ್ನು ಭಕ್ತಿಯಿಂದ ಸಂತೋಷಗೊಳಿಸಿದರು. ಬಹಿಃದೃಷ್ಟಿಯಿಂದ ಸೌಂದರ್ಯರಾಶಿಯನ್ನು ಹೀರಿ ಅನುಭವಿಸಿ, ಆನಂದಪೂರ್ಣ ಹೃದಯವುಳ್ಳವರಾಗಿ ಶ್ರೀರಾಮನ ರಮಣೀಯ ಸೌಂದರ್ಯವನ್ನು ಸ್ವಾಭಾವಿಕವಾಗಿಯೇ ಹೆಚ್ಚಾಗಿ ಅನುಭವಿಸಿದರು. ಅವರ ಬಿಚ್ಚಿದ ಹೃದಯದಿಂದ ಹಾಡುಗಳು ಹೊರಹೊಮ್ಮಿದುವು. ಅದನ್ನು ಆಲಿಸಿದ ಶ್ರೀರಾಮನು ಬಹಳ ಸಂತೋಷಗೊಂಡನು.

ತ್ಯಾಗರಾಜರ ಆಸೆಯು ಯಾವಾಗ ಈಡೇರಿತೋ ಆ ಕ್ಷಣದಲ್ಲಿಯೇ ಪ್ರಭುವಾದ ಶ್ರೀರಾಮಚಂದ್ರನು ಅಂತರ್ಧಾನನಾದನು. ಹೀಗೆ ಶ್ರೀರಾಮಚಂದ್ರನಿಂದ ತ್ಯಾಗರಾಜರಲ್ಲಿ ಸಂತೋಷಸಾಗರವೇ ಹರಿಯಿತು.

ತತ್ತಿರೋಧಾನಪಾಷಾಣ ಪ್ರತಿಬದ್ಧೋಽಭವತ್ ಕ್ಷಣಮ್ ।
ತತಃ ಸ್ವಮವಬುದ್ಧ್ಯಾಯಂ ಶ್ರೀರಾಮಕರುಣಾಂ ಸ್ಮರನ್ ॥ ೪೩ ॥

ನಿರರ್ಗಲಂ ನಿಜೈರ್ಗೀತೈರಸ್ತೌದ್ರಾಮಂ ಕೃಪಾರ್ಣವಮ್ ।
'ಕುತಸ್ತೇ ನ ದಯಾ ಭೂಯಾತ್' ಇತಿ ಪ್ರಾರಭ್ಯ ರಾಘವಮ್ ॥ ೪೪ ॥

ಆಂಧ್ರ್ಯೈವ ಮಾತೃವಾಚಾಮುಂ ತುಷ್ಟಾವೇಷ್ಟಪ್ರದಂ ಕವಿಃ ।
ಅಸಾರತರ ಸಂಸಾರ ದುರಾಚಾರ ವಿದಾರಿಣೀಃ ॥ ೪೫ ॥

ಅಮಂದಗುಣಸಾಂದ್ರ ಶ್ರೀರಾಮಚಂದ್ರಾಭಿವಂದಿನೀಃ ।
ಸಂಸ್ಕೃತಪ್ರಚುರಾ ನೂತ್ನಪಥಬದ್ಧಸುಮೇಳಕಾಃ ॥ ೪೬ ॥

ದೇಶೀಕರ್ಣಾಟಸಂಗೀತ ವಿಚಿತ್ರಸರಣಿಸ್ಪೃಶಃ ।
ತ್ಯಾಗರಾಜನುತೇತ್ಯಾದಿಪದ್ಯೈರಂತೇ ಚ ಮುದ್ರಿತಾಃ ॥ ೪೭ ॥

ಅನರಸ್ತೋತ್ರಸಂಬಂಧಾ ಅವಿಷ್ಣುಸ್ತುತಿವರ್ಜಿತಾಃ ।
ಬಾಲೈರಪಿ ಸುಗಾನಾಂಶಾಃ ಪಂಡಿತೈರಪಿ ದುರ್ಗಮಾಃ ॥ ೪೮ ॥

ಆಪಾದಚೂಡಚಾರ್ವಂಗೀಃ ವೇದಾಂತಾರ್ಥವಿಜೃಂಭಿತಾಃ ।
ಸರ್ವಲಕ್ಷಣಸಂಪನ್ನಾಃ ಸ್ತುತೀ ರಚಿತವಾಂಸ್ತತಃ ॥ ೪೯ ॥

ತಚ್ಛಿಷ್ಯೈರ್ವಿನಯೋತ್ತಂಸೈರ್ದಿಕ್ಷು ವಿಖ್ಯಾಪಿತಾಃ ಶುಭಾಃ ।
ಆಕರ್ಣ್ಯ ರಸಿಕಃ ಕೋ ವಾ ಕೃತೀ ನ ಮುಮುದೇ ಪರಮ್ ॥ ೫೦ ॥

ಶ್ರೀರಾಮನ ಅಂತರ್ಧಾನದಿಂದ ತ್ಯಾಗರಾಜರು ಕ್ಷಣಕಾಲ ಬಂಧಿತರಾದಂತಾಗಿ, ಕ್ಷಣಮಾತ್ರದಲ್ಲಿ ತನ್ನನ್ನು ತಾನು ಅರಿತುಕೊಂಡು, ಪುನಃ ಶ್ರೀರಾಮನ ಕರುಣೆಯನ್ನು ಸ್ಮರಿಸಲು ತೊಡಗಿದರು. ಅಂತರ್ಧಾನನಾದ, ಕರುಣಾಸಾಗರನಾದ ಶ್ರೀರಾಮನನ್ನು

ಕುರಿತು, ನಿರರ್ಗಳವಾಗಿ ಹೊರಬಿದ್ದ ತನ್ನ ಗೀತೆಗಳಿಂದ 'ಪುನಃ ನಿನ್ನ ದಯೆಯು ನನಗೆ ಎಂದು ದೊರಕುವುದು ?' ಎಂದು ಕೇಳಿದರು.

ಕವಿಯಾದ ತ್ಯಾಗರಾಜರು ಇಷ್ಟಪ್ರದವಾದ, ಮಾತೃಭಾಷೆಯಾದ ತೆಲುಗಿನಲ್ಲಿ, ಅಸಾರತರವಾದ ಈ ಪ್ರಪಂಚದಲ್ಲಿ ದುರಾಚಾರಗಳನ್ನು ಹೋಗಲಾಡಿಸುವ ಹಾಡುಗಳಿಂದ ಶ್ರೀರಾಮನನ್ನು ಸಂತುಷ್ಟಗೊಳಿಸಿದರು. ಅಮರಗುಣಸಾಂದ್ರನಾದ ಶ್ರೀರಾಮಚಂದ್ರನನ್ನು ಅಭಿನಂದಿಸುವ ಮೇಳರಾಗಾದಿಗಳಿಂದ ಕೂಡಿದ ಹಾಡುಗಳನ್ನು ಸಂಸ್ಕೃತದಲ್ಲಿ ರಚಿಸಿದರು. ದೇಶೀ ಹಾಗೂ ಕರ್ನಾಟ ಸಂಗೀತಗಳ ಸರಣಿಗಳಲ್ಲಿ ಪರಿಣತರಾಗಿದ್ದ ತ್ಯಾಗರಾಜರು 'ನಂತ' ಇತ್ಯಾದಿ ಪದಗಳನ್ನು ಹಾಡುಗಳ ಕೊನೆಯಲ್ಲಿ ಬಳಸಿದ್ದಾರೆ. ನರಸ್ತುತಿಗೆ ಸಂಬಂಧಿಸಿದ, ವಿಷ್ಣುಸ್ತುತಿಯಿಲ್ಲದ ಸ್ತೋತ್ರಗಳನ್ನು ಬಿಟ್ಟು, ಎಳೆಯರಿಗೂ ಸುಲಭವಾಗಿ ಅರ್ಥವಾಗುವಂತೆ ಹಾಗೂ ಕೆಲವು ಸಂದರ್ಭಗಳಲ್ಲಿ ಪಂಡಿತರಿಗೂ ಅರ್ಥ ಮಾಡಿಕೊಳ್ಳಲು ಕಷ್ಟವಾಗುವ ಹಾಡುಗಳನ್ನು ರಚಿಸಿದ್ದಾರೆ. ಪಾದದಿಂದ ಶಿರದವರೆಗೂ ಸುಂದರವಾದ ವೇದಾಂತಾರ್ಥಗಳಿಂದ ವಿಜೃಂಭಿಸುವ, ಸರ್ವಲಕ್ಷಣಸಂಪದ್ಭರಿತವಾದ ಸ್ತೋತ್ರಗಳನ್ನು ರಚಿಸಿದ್ದಾರೆ.

ವಿನಯವನ್ನೇ ಆಭರಣವನ್ನಾಗಿ ಹೊಂದಿರುವ ತ್ಯಾಗರಾಜರ ಶಿಷ್ಯರು ಎಲ್ಲಾ ದಿಕ್ಕುಗಳಲ್ಲಿ ಪ್ರಖ್ಯಾತಿ ಪಡೆದಿದ್ದಾರೆ. ತ್ಯಾಗರಾಜರ ರಚನೆಗಳನ್ನು ಕೇಳಿ ಆನಂದ ಪಡದ ರಸಿಕರು ಈ ಲೋಕದಲ್ಲಿ ಯಾರು ತಾನೇ ಇದ್ದಾರೆ!

ರಾಮಶೇಷಾಭಿಧಾಃ ಶಾಸ್ತ್ರಿಪುಂಗವಾಃ ಗಾನಕೋವಿದಾಃ ।
ಭಾಷ್ಯಂ ಕೃಷ್ಣಾಭಿಧಾನಾಶ್ಚ ಶಾಸ್ತ್ರಿಣೋ ಗಾಯಿಶೇಖರಾಃ ॥ ೫೧ ॥

ಅಪರೇ ಧರಣೀಪಾಲಾಃ ಸಂಸ್ಕೃತಾಂಧ್ರವಿಶಾರದಾಃ ।
ಪೌರಾಣಿಕಾಸ್ತಥಾ ಶಿಷ್ಯಾ ವೇದಾಂತತ್ರಯವೇದಿನಃ ॥ ೫೨ ॥

ಸರ್ವೇಽಮುಂ ತ್ಯಾಗರಾಜಾಖ್ಯಂ ಸತ್ಸಂಗೀತೋದ್ಧಿಧೀರ್ಷಯಾ ।
ಸಂಜಾತಂ ಧರಣೌ ಕಂಚಿದ್ ಗಂಧರ್ವಂ ತಂ ಚಚಕ್ಷಿರೇ ॥ ೫೩ ॥

ಇತ್ಥಂ ಪ್ರಸಿದ್ಧಕವಿ ಗಾಯಕಶೇಖರೋಽಯಂ
ದ್ವಾವಿಂಶ ಏವ ವಯಸಾ ವಚಸಾತಿಚಾರುಃ ।
ರಾಮಪ್ರಿಯೋಽಚ್ಯುತಮನಸಾ ತಪಸಾ ತಪಸ್ವೀ
ಶ್ರೀತ್ಯಾಗರಾಜವಿಬುಧೌ ವವೃಧೇಽಭಿಮಾನ್ಯಃ ॥ ೫೪ ॥

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ಚತುರ್ಥ ಸರ್ಗಃ

ರಾಮಶೇಷರೆಂಬ ಶಾಸ್ತ್ರಿಗಳು ಗಾನಕೋವಿದರು; ಭಾಷ್ಯಂ ಕೃಷ್ಣ ಎಂಬ ಹೆಸರಿನ ಶಾಸ್ತ್ರಿಗಳು ಗಾನಶೇಖರರು. ಉಳಿದವರು ರಾಜರು; ಸಂಸ್ಕೃತ ಹಾಗೂ ತೆಲುಗು ಭಾಷಾ ವಿಶಾರದರು; ಹಾಗೆಯೇ ಪುರಾಣಗಳನ್ನು ತಿಳಿದವರು, ಸದಾಚಾರ ಸಂಪನ್ನರಾದ ವೈದಿಕರು; ಮೂರು ವೇದಗಳನ್ನು ತಿಳಿದವರು—ಈ ಎಲ್ಲರೂ ಸತ್ಸಂಗೀತದಿಂದ ಉನ್ನತಶಿಖರಕ್ಕೇರಿದ ತ್ಯಾಗರಾಜರನ್ನು ಯಾರೋ ಗಂಧರ್ವನೇ ಭೂಮಿಯಲ್ಲಿ ಹುಟ್ಟಿ ಬಂದಿರುವನೆಂದು ತಿಳಿದರು.

ಈ ರೀತಿಯಾಗಿ ಪ್ರಸಿದ್ಧರಾದ ಗಾಯಕಶೇಖರರೂ, ಸ್ವಚ್ಛವಾದ ಮನಸ್ಸಿನ ರಾಮ ಪ್ರಿಯನೂ, ತಪಸ್ವಿಯೂ, ತನ್ನ ಇಪ್ಪತ್ತೆರಡನೆಯ ವರ್ಷದಲ್ಲೇ ಅತಿಸುಂದರವಾಗಿ ಮಾತನಾಡುವವರೂ ಆಗಿದ್ದ ತ್ಯಾಗರಾಜ ವಿಬುಧರು ರಸಿಕಜನರ ಅಭಿಮಾನಕ್ಕೆ ಅರ್ಹ ರಾಗಿ ಪ್ರವರ್ಧಮಾನಕ್ಕೆ ಬಂದರು.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ನಾಲ್ಕನೆಯ ಸರ್ಗವು

## ಪದಾರ್ಥ ಚಂದ್ರಿಕಾ

## ಸರ್ಗ ನಾಲ್ಕು

೧. ಮಧ್ಯಮೇ—ಸ್ವರ್ಗ ಮತ್ತು ಪಾತಾಳಗಳ ನಡುವೆ ಇದ್ದು. ಮಹಾಧರ್ಮಕೃತಿ ಕ್ಷಮೇ—ಹಿರಿದಾದ, ವೇದಪ್ರತಿಪಾದ್ಯವಾದ, ಅತಿ ಮಹತ್ವದ ಫಲಗಳನ್ನು ನೀಡುವ ಧರ್ಮಗಳಾದ ಯಾಗಾದಿಗಳ ಅನುಷ್ಠಾನಕ್ಕೆ ಅನುಕೂಲವಾಗಿರುವ. ಅನ್ಯಯೋಃ— ಸ್ವರ್ಗನರಕಗಳ, ಈ ಭೂಮಿಯಲ್ಲಿ ಮಾಡಿದ ಸುಕೃತ ದುಷ್ಕೃತಗಳ ಫಲರೂಪವಾಗಿರು ವುದರಿಂದ ಭೂಮಿಯಲ್ಲೇ ಅವುಗಳ ಸಾಧನರೂಪವಾದವುಗಳ ಅನುಷ್ಠಾನವು ಸುಲಭ ಎಂದು ಭಾವಾರ್ಥ.

೨. ಅಸೌ—ಪುತ್ರನು.

೪. ಪಿತುಃ—ತಂದೆಗಾಗಿ.

೫. ರಾಘವ ಮುಂತಾದ ಉಪಮಾನ ಹೇಳುವಲ್ಲಿ ಅವರುಗಳ ತಾದಾತ್ಮ್ಯವನ್ನು ಹೇಳಿರುವುದು ಅತ್ಯಂತ ಸಾದೃಶ್ಯ ಸಂಬಂಧಕ್ಕಾಗಿ.

೮. ಅಕ್ಷರಸೇವಿತಂ—ನಿತ್ಯನಾದ ಪರಮಾತ್ಮನನ್ನು ಸೇವೆ ಮಾಡುವವನನ್ನು ಅಥವಾ ಸದ್ವಿದ್ಯೆಯಲ್ಲಿ ಆಸಕ್ತನಾದವನನ್ನು.

೯. ಬ್ರಹ್ಮಭೂಯಂ—ಬ್ರಹ್ಮಭಾವವನ್ನು.

೧೦. ಶಾಂತಾಂ—ರಾಮಬ್ರಹ್ಮನ ಪತ್ನಿ. ಭವಬಂಧನದಿಂದ ಶಾಂತಾ ಎಂದರೆ ವಿಮುಕ್ತ ಳಾದಳು.

೧೩. ಸತ್ಯಾ—ಸಾಧ್ವಿಯಾದ ಪತ್ನಿ.

೧೭. ವಿಧೀಯತಾಂ—ಆಜ್ಞಾಪಿಸಲ್ಪಡಲಿ ನಿನ್ನಿಂದ, ಎಂಬ ವಾಕ್ಯವಿಶೇಷ.

೧೯. ಪ್ರಾರ್ಥಿನಂ—ತ್ಯಾಗರಾಜರನ್ನು.

೨೨. ಭವತಾರಕಂ—ಸಂಸಾರಸಾಗರದಿಂದ ದಡ ಹಾಯಿಸುವ, ತಾರಕಂ—ತಾರಕ ಮಂತ್ರ. ರಾಮ ರಾಮ ಎಂಬ ಮಂತ್ರಕ್ಕೆ ತಾರಕ ಎಂದು ಯೋಗರೂಢಿ.

೨೪. ಆಯಂತ್ರಿತೇಂದ್ರಿಯಃ—ಚೆನ್ನಾಗಿ ವಶದಲ್ಲಿರುವ ಇಂದ್ರಿಯ ಸಮೂಹಗಳುಳ್ಳವನು. ಅತಂದ್ರಿತಃ—ಆಲಸ್ಯವಿಲ್ಲದವನು.

೨೫. ತನ್ಮಯತಾ—ಬ್ರಹ್ಮಭಾವ.

೨೮. ಶ್ರುತ್ಯುಕ್ತಧರ್ಮದಕ್ಷಾಯ—ವೇದಪ್ರತಿಪಾದ್ಯವಾದ ಧರ್ಮಾನುಷ್ಠಾನ ನಿಪುಣನಾದವನಿಗೆ.

೨೯. ಅಂಚನೀಯಾಂಘ್ರಿ—ಪೂಜಾರ್ಹವಾದ ಪಾದಗಳುಳ್ಳ.

೩೦. ಮನುಂ—ಮಂತ್ರವನ್ನು. ಮನುಜಾದರ್ಶಃ—ಮನುಷ್ಯರಿಗೆ ಧರ್ಮಾಚರಣೆಯಲ್ಲಿ ಆದರ್ಶಪ್ರಾಯನಾದವನು, ಮಾರ್ಗದರ್ಶಿ. ಸಮಾಪಯತ್—ಜಪಿಸಿ ಪರಿಪೂರ್ಣ ಮಾಡಿದನು.

೩೪. ಆಶುಸಾ ದದರ್ಶ—ಶೀಘ್ರವಾಗಿ ಆಕೆಯು ನೋಡಿದಳು. ಏನನ್ನು ನೋಡಿದಳೆಂಬುದನ್ನು ಮುಂದಿನ ಶ್ಲೋಕಗಳಲ್ಲಿ ಹೇಳಲಾಗಿದೆ.

೩೬. ಅಹೀಶಕರಃ—ಸರ್ಪರಾಜನಂತೆ ಕಾಣುವ ಕೈಗಳುಳ್ಳವನು. ಸಜ್ಜನರಿಗೆ ಅಭಯವನ್ನು ಕೊಡುವಾತ.

೩೭. ನಿರಾಲೇಪಃ—ಪುಣ್ಯ ಮತ್ತು ಪಾಪಗಳಿಂದ ಉಂಟಾಗುವ ವಿಕಾರವಿಲ್ಲದವನು. ದೃಶಾ—ಕಣ್ಣಿನಿಂದ, ಪಪೇ—ಕುಡಿದನು; ಅಂದರೆ, ಚೆನ್ನಾಗಿ ನೋಡಿದನು.

೪೧. ಆನಂದತುಂದಿಲ ಮಾನಸ—ಆನಂದಪೂರ್ಣ ಹೃದಯನಾದನೆಂದು ಉಳಿದ ಭಾಗ. ಈಶಿತುಃ—ಈಶ್ವರನಾದ ರಾಘವನ, ರಾಮಣೀಯಕಂ—ಸೌಂದರ್ಯವನ್ನು, ಮಿತಿಯಿಲ್ಲದೆ ಕುಡಿದಿರುವ ಕ್ಷೀರಸಮುದ್ರಕ್ಕೆ ಹೇಗೋ ಹಾಗೆ, ಒಂದು ರೀತಿಯಿಂದ ಹೊರಗೆ ನಿಂತು ನೋಡಿಬಿಡುವುದೂ ಪ್ರಕೃತಿಸಹಜವೆಂದೂ ತಾತ್ಪರ್ಯ.

೪೭. ಸಂಗೀತದಲ್ಲಿ ಗಾನಕ್ರಮದ ಎರಡು ವಿಧಗಳು ತೋರುತ್ತವೆ—ದೇಶೀ ಮತ್ತು ಕರ್ನಾಟ.

೪೮. ಪಂಡಿತರಿಂದಲೂ, ಗಾನಕುಶಲರಿಂದಲೂ ಮರ್ಮವನ್ನು ತಿಳಿಯಲು ಅಸಾಧ್ಯವಾದ.

೫೦. ವಿನಯೋತ್ತಂಸ್ಯೈಃ—ವಿನಯವೇ ಆಭರಣವಾಗಿರುವ.

೫೩. ಕಂಚಿದ್—ಹೀಗೆಯೇ ಎಂದು ಖಚಿತವಾಗಿ ಹೇಳಲು ಅಸಾಧ್ಯವಾದ ಮಹಿಮೆಯುಳ್ಳವನನ್ನು, ಅಂದರೆ ಪ್ರಸಿದ್ಧನಾದ ಅವನನ್ನು.

೫೪. ಅಭಿಮಾನ್ಯಃ—ರಸಿಕ ಜನರ ಅಭಿಮಾನಕ್ಕೆ ಅರ್ಹನಾದವನು. ಪವೃಧೇ—ಬೆಳೆದನು.

# ಸರ್ಗ ಐದು

ಪಂಚಯನ್ ಸಗುಣಾನ್ ವಿಷ್ಣೋ ರಂಜಯನ್ ರಸಿಕಾನ್ ಜನಾನ್ ।
ಸಂಚಿಕಾಯ ಮಹತ್ ಪುಣ್ಯಂ ಮಂಜಗಾನ ತಪೋಧನಃ ॥

ಮಂದಿರೇ ಸುಂದರಂ ರಾಮಂ ವಂದಾರುಸುರವಂದಿತಮ್ ।
ಆನರ್ಚ ಪ್ರತ್ಯಹಂ ಭಕ್ತ್ಯಾ ಸ್ವವಂಶತಿಲಕಾರ್ಚಿತಮ್ ॥

ದೇವಗೇಹೇ ಪ್ರತಿಷ್ಠಾಪ್ಯ ಮಣಿಮಂಟಪಮುಜ್ಜ್ವಲಮ್ ।
ತನ್ಮಧ್ಯೇ ಜಾನಕೀಜಾನಿಂ ಪ್ರಸಾಧ್ಯ ಮಣಿಭೂಷಣೈಃ ॥

ವಿಷ್ಣುನಾಮಸಹಸ್ರೇಣ ಪ್ರಾರ್ಚ್ಯಪುಷ್ಪೈಃ ಸುಗಂಧಿಭಿಃ ।
ದಿನೋತ್ಸವೈಸ್ತಥಾ ಪಕ್ಷಮಾಸವಾತ್ಸರಿಕೋತ್ಸವೈಃ ॥

ಗೀತೈರ್ವಾದ್ಯೈಶ್ಚ ನೃತ್ತೈಶ್ಚ ಹರೇರ್ಮಹಿಮವರ್ಣನೈಃ ।
ಕಥಾಲಾಪೈಃ ಸಮಾನ್ ಭಕ್ತಾನ್ ನಾಸ್ತಿಕಾನಪ್ಯತೋಷಯನ್ ॥

ಶ್ರೀರಾಮನವಮೀಂ ಪುಣ್ಯಾಮುತ್ಸವೈರ್ವಿವಿಧೈಃ ಶುಭೈಃ ।
ಮಿಷ್ಟಾನ್ನಭಕ್ಷ್ಯದಾನೈಶ್ಚ ಶೋಭನೋಽಯಮಶೋಭಯತ್ ॥

ಶ್ರೀರಾಮಸ್ಯ ಸಸೀತಸ್ಯ ಮುದಾ ಡೋಲೋತ್ಸವಂ ತಥಾ ।
ವಸಂತೋತ್ಸವಮಪ್ಯೇಷ ವಾದ್ಯಗೀತೈರವರ್ತಯನ್ ॥

ಮೈಥಿಲ್ಯಾ ಸಹ ಕೌಶೇಯಸುಮಶಯ್ಯೋಪಶಾಯಿನಮ್ ।
ರಾಮಂ ನೀಲಾಂಬರೀಗಾನೈಃ ಕ್ಷಣಮಸ್ವಾಪಯದ್ ವಿಭುಮ್ ॥

ನಿಷ್ಕಾಪೇ ನಿಷ್ಕಲಂಕೇಸ್ಮಿನ್ ನಿರಾಧಾರೇ ಚ ನಿರ್ಧನೇ ।
ಲೋಕೈಕ ಶ್ಲಾಘ್ಯತಾಂ ಯಾತೇ ಮೂರ್ಖೋಽಸೂಯಾಂ
ಕಥಂ ತ್ಯಜೇತ್ ॥

ಯೋನ್ಯಸ್ಮಿನ್ ಗಾನಕೌಶಲ್ಯಾತ್ ಸೌಶೀಲ್ಯಾಚ್ಚ ವಿರಕ್ತಿತಃ ।
ಪೂಜ್ಯಮಾನೇ ನೃಪೈಃ ಸರ್ವೈಃ ಕಿಂಚಿಜ್ಞಾನಾಂ ತು ಕಾಕಥಾ ॥ ೧

ವಯಸಾ ದ್ರವಿಣೈರ್ಭೂಪಬಹುಮಾನೈಶ್ಚ ಯೇ ಪುರಾ ।
ಪ್ರಖ್ಯಾತಾಸ್ತೇ ಸಮೋಽಭೂವನ್ ಮಿಹಿರೇ ಹಿಮಶೀಕರಾಃ ॥ ೧

ಏತಸ್ಮಿನ್ ರಾಜತಿ ಪ್ರಾಜ್ಞೇ ತೇ ಕತ್ರಾಪಿ ನಿಲಿಲ್ಯಿರೇ ।
ಭಾಸ್ವತಃ ಪುರತೋ ಭಾಯಾತ್ ಕಥಂ ತಾರಾವಲಿರ್ದಿವಿಃ ॥ ೧

ಅಭ್ಯಸೂಯೋಸ್ತದಾ ಕಸ್ಯಾಪ್ಯಪವಾದಂ ನಿಶಮ್ಯ ಸಃ ।
ಸ್ವಕೃತೈಃ ಸ್ವರಸಾಹಿತ್ಯೈಃ ಸ್ವರಜ್ಞತ್ವಮದರ್ಶಯತ್ ॥ ೧೩ ॥

'ರಾಮೈಕವ್ಯಗ್ರಚಿತ್ತಾಯ ನಿರುಪದ್ರವಜೀವಿನೇ ।
ಮಹ್ಯಮೇತೇಽಭ್ಯಸೂಯಂತೋ ಹಂತ ಮಾ ಯಾಸಿಷುಃಕ್ಷತಿಮ್' ॥ ೧೪ ॥

ಇತ್ಯೇವ ಮೂರ್ಖಲೋಕೇಷು ಧನಮತ್ತೇಷು ಕೇಷುಚಿತ್ ।
ಅನ್ವತಾದೀಪಸೌ ತಾಪಂ ಸಂಜಿಹೀರ್ಷುಃ ಸದಾ ಸತಾಮ್ ॥ ೧೫ ॥

ತನ್ನ ಕೃತಿಗಳಿಂದ ವಿಷ್ಣುವಿನ ಕಲ್ಯಾಣಗುಣಗಳನ್ನು ವರ್ಣಿಸುತ್ತಾ, ರಸಿಕಜನರನ್ನು ಸಂತೋಷಗೊಳಿಸುತ್ತಾ, ಪುಣ್ಯವನ್ನು ಗಳಿಸಿ ಸುಂದರವಾಗಿ ಹಾಡುವ ತಪೋಧನನಾಗಿದ್ದರು. ಮಂದಿರದಲ್ಲಿ, ಪೂಜ್ಯರಾದ ದೇವತೆಗಳಿಂದ ವಂದಿಸಲ್ಪಡುವ ಸುಂದರ ರಾಮನನ್ನೂ, ತನ್ನ ವಂಶದ ತಿಲಕಪ್ರಾಯವಾದ ಮೂರ್ತಿಯನ್ನೂ ಬಹಳ ಭಕ್ತಿಯಿಂದ ಪ್ರತಿದಿನವೂ ಅರ್ಚಿಸುತ್ತಿದ್ದರು. ದೇವರ ಮನೆಯಲ್ಲಿ ಮಣಿಮಂಟಪದಲ್ಲಿ ಜಾನಕೀರಮಣನನ್ನು ಪ್ರತಿಷ್ಠಾಪಿಸಿ ಮಣಿಭೂಷಣಗಳಿಂದ ಪೂಜಿಸಿ, ವಿಷ್ಣುಸಹಸ್ರನಾಮಾರ್ಚನೆ ಮಾಡಿ ಸುಗಂಧಪುಷ್ಪಗಳಿಂದ ಅಲಂಕರಿಸಿ, ದಿನೋತ್ಸವ, ವರ್ಷೋತ್ಸವ, ಮಾಸೋತ್ಸವಗಳನ್ನು ಆಚರಿಸುತ್ತಿದ್ದುದಲ್ಲದೆ, ಗೀತ ವಾದ್ಯ ನೃತ್ಯ ಮೊದಲಾದುವುಗಳಿಂದ ಹರಿಯ ಮಹಿಮೆಗಳನ್ನು ವರ್ಣನೆಮಾಡಿ, ಹರಿಕಥೆ, ಪುರಾಣಶ್ರವಣ ಇತ್ಯಾದಿಗಳಿಂದ ಭಕ್ತರನ್ನೂ ಮತ್ತು ನಾಸ್ತಿಕರನ್ನೂ ಸಹ ಸಂತೋಷಗೊಳಿಸುತ್ತಿದ್ದರು.

ಶುಭಕರರಾದ ತ್ಯಾಗರಾಜರು ಪುಣ್ಯಕರವಾದ ಶ್ರೀರಾಮನವಮಿಯೇ ಮೊದಲಾದ ವಿವಿಧವಾದ ಮಂಗಳೋತ್ಸವಗಳನ್ನು ನಡೆಸಿ, ಸೀತಾಸಮೇತನಾದ ಶ್ರೀರಾಮನ ಡೋಲೋತ್ಸವವನ್ನೂ, ವಾದ್ಯಗೀತಾದಿಗಳಿಂದ ವಸಂತೋತ್ಸವವನ್ನೂ ಆಚರಿಸಿ, ಮೈಥಿಲಿಯೊಡನೆ ಕೌಶೇಯ ಪುಷ್ಪದ ಹಾಸಿಗೆಯಲ್ಲಿ ಮಲಗಿರುವ ವಿಭುವನ್ನು ನೀಲಾಂಬರಿ ರಾಗದ ಗಾನವಿಶೇಷದಿಂದ ತೃಪ್ತಿಗೊಳಿಸಿ, ಮೃಷ್ಟಾನ್ನ ಭೋಜನಾದಿಗಳಿಂದ ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದರು.

ನಿಷ್ಕಾಮನೂ, ಕಳಂಕರಹಿತನೂ, ಧನಹೀನ ಹಾಗೂ ಆಧಾರರಹಿತನೂ ಆದ ತ್ಯಾಗರಾಜರನ್ನು ಜನರೆಲ್ಲರೂ ಅವರ ಗುಣವನ್ನು ಮೆಚ್ಚಿ ಹೊಗಳುತ್ತಿದ್ದರೆ, ಮೂರ್ಖನಾದವನು ತನ್ನ ಅಸೂಯೆಯನ್ನು ಹೇಗೆತಾನೇ ಬಿಡಲು ಸಾಧ್ಯ? ಗಾನಕುಶಲಿಯೂ, ವಿರಕ್ತನೂ ಆದ ಈ ಯುವಕನನ್ನು ಎಲ್ಲಾ ರಾಜರೂ ಪೂಜಿಸುತ್ತಿರಲು ಈ ಅಲ್ಪಮತಿಗಳು ಯಾವ ಲೆಕ್ಕ! ಹಿಂದೆ ರಾಜರುಗಳಿಂದ ಬಹುಮಾನಗಳನ್ನು ಪಡೆದಿದ್ದವರೆಲ್ಲರೂ ಸೂರ್ಯನ ಕಿರಣಗಳಲ್ಲಿ ಹಿಮ ಕರಗಿಹೋಗುವಂತೆ ವಯಸ್ಸಿನಲ್ಲಿ ಕರಗಿಹೋದರು. ಬೇರೆಲ್ಲೂ ಕಂಡುಬರದ ಬುದ್ಧಿವಂತರಾದ ತ್ಯಾಗರಾಜರು ಈ ರೀತಿ ರಾರಾಜಿಸುತ್ತಿರಲು ಇನ್ನು ಮೂರ್ಖರ ಪಾಡೇನು? ಆಕಾಶದಲ್ಲಿ ಸೂರ್ಯನು ಪ್ರಜ್ವಲಿಸುತ್ತಿದ್ದರೆ ತಾರಾಗಣದ ಸ್ಥಿತಿಯು ಹೇಗಿತ್ತೋ ಹಾಗೆ ಮೂರ್ಖರ ಸ್ಥಿತಿಯಿದ್ದಿತು. ತ್ಯಾಗರಾಜರು ಮೂರ್ಖರ

ಅಪವಾದವನ್ನು ಕೇಳಿ, ತನ್ನಿಂದ ರಚಿತವಾದ ಸ್ವರಸಾಹಿತ್ಯಗಳಲ್ಲಿನ ಸ್ವರಜ್ಞಾ
ಪ್ರದರ್ಶಿಸಿದರು. ಇತರರಿಗೆ ತೊಂದರೆ ಕೊಡದ, ರಾಮನನ್ನೇ ಏಕಾಗ್ರಮನಸಿ
ಯಾವಾಗಲೂ ಧ್ಯಾನಿಸುವ ತನಗೆ ಈ ಮೂರ್ಖರು ತೊಂದರೆ ನೀಡಿ ಅವನತಿ ಹೆ
ವರಲ್ಲಾ ಎಂದು ತ್ಯಾಗರಾಜರು ವ್ಯಥೆಪಟ್ಟರು. ಇದು ಕೆಲವು ಧನಮತ್ತರಾದ ಪ
ಜನರಿಗೆ ಅನ್ವಯವಾಗುತ್ತಿದ್ದರೂ, ಅವರು ಮಾತ್ರ ಸತ್ಪುರುಷರ ತಾಪಹರಣದಲ್ಲಿ
ನಿರತರಾಗಿದ್ದರು.

ಅಥ ಜಾತು ಶನ್ಯೈರ್ಘಸ್ರೇ ಪ್ರಾತಃ ನಿಷ್ಣಾಸುರಾಲಯೇ ।
ತೈಲಾಭ್ಯಕ್ತಶಿರಾಃ ಕೇನಾಪ್ಯೈಕ್ಷಿ ಭಿಕ್ಷುವರೇಣ ಸಃ ।

ರೀಣತೈಲೇನ ಶೀರ್ಷೇಣ ವಪುಷಾ ಮಿತವಾಸನಾ ।
ಶ್ರದ್ಧಾಪೂರ್ಣೇನ ಚಿತ್ತೇನ ತಸ್ಯ ಸ್ವಾಗಮನಂ ವ್ಯಧಾತ್ ।

ಅಭಿವಾದ್ಯ ಯತೀಶಂ ತಮಕಾಲೇಽಪಿ ಸಮಾಗತಮ್ ।
ಆಸನೇ ಚೋಪವೇಶ್ಯಾಯಂ ಸದಾರಃ ಸಮಯಾಚತ ।

'ವಂದಾರುನತಕರ್ಮಂದೀವೃಂದವಂದಿತ ಸುಂದರ ।
ಇಂದಿರಾವರಸಂತೋಷಾನ್ಮಂದಿರಂ ಮೇ ಸಮಾಗಮಃ

ಅವಾಪ್ತಜನುಷಾಕ್ಷೋಣ್ಯಾಂ ಮನುಷ್ಯೇಣ ಬಹುಶ್ರಿಯಾ ।
ಪ್ರಾಪ್ತವ್ಯೇಷು ಹಿ ಭದ್ರೇಷು ಪ್ರಥಮಂ ಯತಿದರ್ಶನಮ್

ಆಗಮ್ಯಮಹಿಮಾಽನಿಚ್ಛಃ ಸ್ವಯಂ ಮೇ ಕುಟಿಲಂ ಗೃಹಮ್ ।
ಯದೃಚ್ಛಯಾಗತೋ ಭೈಕ್ಷ್ಯಂ ಮೇ ಗೃಹೀತುಮಿಹಾರ್ಹಸಿ

ಅಥ ದೂರಿತಕಾಮಸ್ಯ ಜಗದ್ದುರಿತಹಾರಿಣಃ ।
ಭವತಸ್ತಾರ ಕಸ್ಯಾಜ್ಞಾಂ ಭವತೇ ಪೂರಯಾಮ್ಯಹಮ್'

ಒಂದು ಶನಿವಾರ ಬೆಳಿಗ್ಗೆ ಸ್ನಾನಗೃಹದಲ್ಲಿ ದೇಹಕ್ಕೆಲ್ಲಾ ಎಣ್ಣೆ ಹಚ್ಚಿಕೆ
ಸಮಯದಲ್ಲಿ ತ್ಯಾಗರಾಜರು ಒಬ್ಬ ಯತಿಯನ್ನು ನೋಡಿದರು. ಸೋರುತ್ತಿದ್ದ
ಯನ್ನು ಲಕ್ಷಿಸದೆ ಮಿತವಾದ ಒಟ್ಟೆ ಧರಿಸಿ ಶ್ರದ್ಧಾಪೂರ್ವಕವಾಗಿ ಅವರನ
ಮನೆಗೆ ಆಹ್ವಾನಿಸಿದರು. ಆ ಯತಿವರ್ಯನಿಗೆ ನಮಸ್ಕರಿಸಿ ಆಸನದಲ್ಲಿ ಕೂರಿಸಿ ಅ
ಹೀಗೆ ಪ್ರಾರ್ಥಿಸಿದರು—

'ಸನ್ಯಾಸಿವೃಂದದಿಂದ ನಮಸ್ಕರಿಸಲ್ಪಡುವ ಸುಂದರನೇ! ರಮಾಪತಿ
ಸಂತೋಷಪಡಿಸುವುದಕ್ಕೋಸ್ಕರವೇ ಈ ನನ್ನ ಮನೆಗೆ ತಮ್ಮ ಆಗಮನವಾ
ಭೂಲೋಕದಲ್ಲಿ ಹುಟ್ಟಿರುವ ಮನುಷ್ಯನಿಂದ ಹೆಚ್ಚು ಐಶ್ವರ್ಯ ಗಳಿಸಲ್ಪಟ್ಟರೂ,
ಪುರುಷರಿಂದ ಮೊದಲು ಯತಿದರ್ಶನ ಪಡೆಯಬೇಕು. ಈ ಒಡಪಾಯಿಯ

ಅತ್ಯಂತ ಮಹಿಮಾಶಾಲಿಯಾದ, ಇಚ್ಛಾರಹಿತರಾದ ನೀವು ನೀವಾಗಿಯೇ ಬಂದಿರುವಿರಿ. ನೀವು ಇಲ್ಲಿ ಯಾವುದೇ ವಿಧವಾದ ಭಿಕ್ಷೆಯನ್ನು ನನ್ನಿಂದ ಪಡೆಯಲು ಅರ್ಹರಾಗಿರುವಿರಿ. ಆದ್ದರಿಂದ, ದೂರಾಲೋಚನೆಯುಳ್ಳ ಜಗತ್ತಿನ ಸಂಕಷ್ಟಗಳನ್ನು ಹೋಗಲಾಡಿಸುವ ನಿಮ್ಮ ತಾರಕಾಜ್ಞೆಯನ್ನು ಪೂರ್ತಿಮಾಡಲು ಪ್ರಯತ್ನಿಸುವೆನು.'

ಇತಿ ಪ್ರಾರ್ಥ್ಯಮಾನಸ್ಯ ತ್ಯಾಗರಾಜಸ್ಯ ಧರ್ಮಿಣಃ ।
ಶ್ರದ್ಧಾಭಕ್ತಿಭರೈಸ್ತುಷ್ಟೋ ಯತಿರಾಜಸ್ತಮಬ್ರವೀತ್ ॥ ೨೩ ॥

"ಪ್ರೀತೋಽಸ್ಮಿ ತವ ಪೂಜಾಭಿರ್ಭೈಕ್ಷ್ಯಮಪ್ಯಸ್ತು ತೇ ಗೃಹೇ ।
ತವೈವೇಕಂ ಗೃಹಂ ಮೇಽಭೂದ್ ಧರ್ಮದ್ವಾರಮನಾವೃತಮ್ ॥ ೨೪ ॥

ಮಾಂ ವಿದ್ಧಿ ಧರ್ಮಪಾತ್ರೇಷು ಕ್ಷೇತ್ರೇಷು ಭುವನೇಽಖಿಲೇ ।
ದೃಷ್ಟದೇವಂ ಸುಸಂಗೀತಲಾಲಸಂ ರಾಮಸೇವಕಮ್ ॥ ೨೫ ॥

ಆಕರ್ಣ್ಯ ಧನ್ಯಜನ್ಮಾನಂ ತ್ಯಾಗರಾಜಾಭಿಧಂ ದ್ವಿಜಮ್ ।
ಅಸ್ಮಿನ್ ಪಂಚನದಕ್ಷೇತ್ರೇ ವಸಂತಂ ದ್ರಷ್ಟುಮಾಗಮಮ್ ॥ ೨೬ ॥

ತದೀಯಾ ಭುವಿ ವಿಖ್ಯಾತಾ ಕೃತೀಭಕ್ತಿರಸೋಜ್ವಲಾಃ ।
ತನ್ಮುಖಾದೇವ ಶುಶ್ರೂಷು ಮೃಗಯೋಽಹಂ ಪ್ರಯತ್ನತಾಃ ॥ ೨೭ ॥

ಅಪಿಜಾನಾಸಿ ಕುತ್ರಾಸ್ತೇ ಗುಣಾವಾಸಃ ಸತಾಪಸಃ ।
ಇತಿ ವಾದಿನಮಾನಸ್ಯ ತ್ಯಾಗರಾಜೋಽಬ್ರವೀನ್ಮುದಾ ॥ ೨೮ ॥

ಧರ್ಮಿಷ್ಠರಾದ ತ್ಯಾಗರಾಜರ ಈ ಪ್ರಾರ್ಥನೆಯಿಂದ, ಅವರ ಶ್ರದ್ಧಾಭಕ್ತಿಗಳಿಂದ ಸಂತೋಷಗೊಂಡ ಆ ಯತಿಯು ಹೀಗೆ ಹೇಳಿದನು—

'ನಿನ್ನ ಪೂಜೆಗಳಿಂದ ಸುಪ್ರೀತನಾಗಿದ್ದೇನೆ. ಈ ದಿನ ಭಿಕ್ಷೆಯು ನಿನ್ನ ಮನೆಯಲ್ಲೇ ಆಗಲಿ. ಧರ್ಮದ್ವಾರವುಳ್ಳ ನಿನ್ನ ಮನೆಯು ನನ್ನ ಮನೆಯಂತೆ. ಧರ್ಮಶ್ರೇಷ್ಠನಾದ, ಸಂಗೀತಪ್ರಿಯ ಹಾಗೂ ಶ್ರೀರಾಮಸೇವಕನಾದ, ತ್ಯಾಗರಾಜ ಎಂಬ ಹೆಸರಿನ ಬ್ರಾಹ್ಮಣನ ಹೆಸರನ್ನು ಕೇಳಿಯೇ ಈ ಜನ್ಮದಲ್ಲಿ ಸಾರ್ಥಕ ಪಡೆದೆ. ಈ ಪಂಚನದ ಕ್ಷೇತ್ರದಲ್ಲಿ ವಾಸವಾಗಿರುವ ಅವನನ್ನು ನೋಡಿ, ಭಕ್ತಿರಸಪೂರಿತವಾದ, ಈ ಭುವಿಯಲ್ಲಿ ವಿಖ್ಯಾತವಾಗಿರುವ ಅವನಿಂದ ರಚಿತವಾದ ಕೃತಿಗಳನ್ನು ಅವನ ಮುಖಾರವಿಂದದಿಂದಲೇ ಕೇಳಲು ಉತ್ಸುಕನಾಗಿ ಇಲ್ಲಿಗೆ ಬಂದೆ. ಅಂತಹ ಗುಣಾಗ್ರಣಿಯಾದ ತಾಪಸನು ಎಲ್ಲಿ ವಾಸಿಸುವವನು ಎಂಬುದು ನಿನಗೆ ತಿಳಿದಿದೆಯೇ ?' ಎಂದು ಕೇಳಿದನು.

ಅಯಿ ಕಾರುಣಿಕ ದ್ರಷ್ಟುಂ ಯಮಾಸೀತ್ ತೇ ಪರಿಶ್ರಮಃ ।
ಸ ಮೂಢಸ್ತ್ವಹಮೇವಾಸ್ಮಿ ಗಾನದಿಂಗ್ಮಾತ್ರದರ್ಶನಃ ॥ ೨೯ ॥

ಭವತೇ ಯೇ ಗುಣಾಃ ಪ್ರೋಕ್ತಾ ನ ತೇ ಸಂತಿ ಮಯಿ ಪ್ರಭೋ ।
ಭವದುಕ್ತೇನ ನಾಮ್ನಾ ತು ಸೋಽಹಮಪ್ಯಸ್ಮಿ ಮಂದಧೀಃ ॥ ೩೦ ॥

ಮಂದೆಯಃ ಕೋಽಪಿ ತಾದೃಕ್ಷಮಹಿಮಾ ಭುವಿ ಸಂಭವೇತ್ ।
ನ ಜಾನೇ ತಮಹಂ ಪ್ರಾಜ್ಞಂ ಕೃತಿನಂ ಕೃತವಿದ್ಯಕಮ್ ॥ ೩೧ ॥

ಆದೇಶೋ ಯದಿ ಯತ್ಜ್ಞಾತಂ ಕಿಂಚಿನ್ಮಂದಧಿಯಾ ಮಯಾ ।
ತದ್ ಗೀತಮಪಿ ಗಾಸ್ಯಾಮಿ ತತ್ರ ದೋಷಜಿಹೀರ್ಷಯಾ ॥ ೩೨ ॥

ಮಯಾಲ್ಪಮತಿನಾಲಕ್ಷ್ಯಲಕ್ಷ್ಮಗಂಧಮಜಾನತಾ ।
ಕೀರ್ತಿತೇಽಪಹರೇದ್ದೋಷಂ ರಾಮಪ್ರೀತಿ ಕೃತೇ ಕೃತೇ ॥ ೩೩ ॥

'ಎಲೈ ಕಾರುಣಿಕನೇ! ಯಾವನನ್ನು ನೋಡಬೇಕೆಂದು ತಾವು ಬಹಳ ಶ್ರಮ ತೆಗೆದುಕೊಂಡಿರುವಿರೋ, ಅಂತಹ ಗಾನದಿಂಗ್ಮಾತ್ರದರ್ಶನ ಮಾಡಿರುವ ಮೂರ್ಖನು ನಾನೇ ಆಗಿದ್ದೇನೆ.

ನಿಮ್ಮಿಂದ ಯಾವ ಗುಣಗಳು ಹೇಳಲ್ಪಟ್ಟವೋ ಅವುಗಳು ನನ್ನಲ್ಲಿಲ್ಲ. ಎಲೈ ಪ್ರಭುವೇ! ನೀವು ಹೇಳಿದ ಆ ಹೆಸರಿನ ಮಂದಬುದ್ಧಿಯುವನು ನಾನೇ ಆಗಿದ್ದೇನೆ. ನನ್ನ ಹೆಸರಿನ ಬೇರೆ ಯಾರಾದರೂ ಅಂತಹ ಮಹಿಮಾನ್ವಿತರಿದ್ದರೆ ಅದನ್ನು ನಾನು ಕಾಣೆ. ಅಂತಹ ಪ್ರಾಜ್ಞಶ್ರೇಷ್ಠರನ್ನು ನಾನೂ ಸಹ ದರ್ಶನ ಮಾಡಲು ಇಚ್ಛಿಸುತ್ತೇನೆ. ತಮ್ಮ ಅಪ್ಪಣೆ ಇದ್ದಲ್ಲಿ ಅಲ್ಪಮತಿಯಾದ ನನ್ನಿಂದ ಯಾವ ಗೀತವು ರಚಿಸಲ್ಪಟ್ಟಿದೆಯೋ ಅದನ್ನು ಹಾಡುವೆನು. ದೋಷಗಳಿದ್ದರೆ ತಿಳಿಸಿ. ರಾಮನ ಪ್ರೀತಿಗೋಸ್ಕರ ರಚಿಸಲ್ಪಟ್ಟ ಕೃತಿಗಳನ್ನು ಲಕ್ಷ್ಯಲಕ್ಷಣಗಳ ಗಂಧವನ್ನು ತಿಳಿಯದ ಅಲ್ಪಮತಿಯಾದ ನಾನು ಹಾಡಿದ್ದೇನೆ.'

ಇತ್ಯುಕ್ತ್ವಾ ಮಂಜುಲಂ ಕಿಂಚಿತ್ ಕೀರ್ತನಂ ಸ್ವಕೃತಂ ಮುದಾ ।
ತದೈವ ಸರಸಂ ಗಾಯನ್ನಪಾರಂ ಮೋದಮಾತನೋತ್ ॥ ೩೪ ॥
ಶ್ರವಃಪುಟೇನ ತದ್‌ಗೀತಂ ನಿಪೀಯ ಸ ಸುಧೋಪಮಮ್ ।
ಅಪಾರೇ ತೋಷವಾಸ್ನಶೌ ನಿಮಗ್ನೋಽಭೂದ್ ಯತೀಶ್ವರಃ ॥ ೩೫ ॥

ಹೀಗೆ ಹೇಳಿ ತಾನು ರಚಿಸಿದ್ದ ಒಂದು ಗೀತೆಯನ್ನು ಬಹಳ ಸಂತೋಷದಿಂದ ಹಾಡಿದರು. ಅದನ್ನು ಹಾಡುವಾಗಲೇ ಪರಮಾನಂದವನ್ನು ಪಡೆದರು. ಅಮೃತಕ್ಕೆ ಸಮಾನವಾದ ಆ ಗೀತೆಯನ್ನು ಕೇಳಿದ ಆ ಯತೀಶ್ವರರು ಸಂತೋಷಸಾಗರದಲ್ಲಿ ಮುಳುಗಿದರು.

ಅಥೈನಂ ಮುನಿಸಿಂಹೋಽಯಮವಾದೀದ್ ಗಾಯಕೋತ್ತಮಮ್ ।
'ನ ವಾಚಃ ಸಂತಿ ಪರ್ಯಾಪ್ತಾಸ್ತವ ವರ್ಣಯಿತುಂ ಕೃತೀಃ ॥ ೩೬ ॥

ಮಾಧುರ್ಯಂ ಶ್ರುತಿಸಾಂಗತ್ಯಂ ರಾಗಾಲಾಪನಚಾತುರೀಮ್ ।
ಮಹಾಪರಿಶ್ರಮೈಕಾಪ್ಯಂ ವೈದುಷ್ಯಂ ಚ ತವೇದೃಶಮ್ ॥ ೩೭ ॥

ಸತ್ಪಾತ್ರೇ ರಾಘವಸ್ತೋತ್ರೇ ವಿನಿಯುಕ್ತಂ ವಿಶಿಷ್ಯತೇ ।
ಈದೃಶ್ಯೈಸ್ತೋಷಿತೋ ಗೀತೈ ರಸಿಕೋ ರಾಘವೋ ಧ್ರುವಮ್ ॥ ೩೮ ॥

ಪ್ರಸನ್ನಃ ಕ್ಷಿಪ್ರಮೇಭ್ಯ್ರಭಸ್ತ್ವಾಭೀಷ್ಟಂ ಪ್ರದಾಸ್ಯತಿ ।
ತದ್ಭಕ್ತಾ ಯತ್ರ ಗಾಯಂತಿ ತತ್ರೈವ ಸ ಹಿ ತಿಷ್ಠತಿ ॥ ೩೯ ॥

ಭೂತಲೇ ದುರ್ಲಭಂ ಜೀರ್ಣತಾಲಪತ್ರಕುಲಾತ್ಮಕಮ್
ಇಮಂ ಪ್ರಾಚೀನಮುದ್‌ಗ್ರಂಥಂ ರಕ್ಷ ಗೇಹೇ ಸುರಕ್ಷಿತಮ್ ॥ ೪೦ ॥

ಯಾವತಾಹಂ ಕ್ಷಣಾತ್ ಸ್ನಾತ್ವಾ ಸಹ್ಯಜಾತಾಮೃತೋರ್ಮಿಷು ।
ಆಗಮಿಷ್ಯಾಮಿ ತೇ ಗೇಹಂ ಭೈಕ್ಷ್ಯಸ್ವೀಕರಣೋತ್ಸುಕಃ' ॥ ೪೧ ॥

ಇತ್ಯಾದಿಶ್ಯ ಯತಿಶ್ರೇಷ್ಠಸ್ತಂ ಗ್ರಂಥಂ ತತ್ಕರಾಂಬುಜೇ ।
ನಿಕ್ಷಿಪ್ಯ ನಿಃಸ್ಪೃಹಃ ಕ್ವಾಪಿ ನಿಶ್ಚಕ್ರಾಮ ಹಸನ್ಮುಖಃ ॥ ೪೨ ॥

ಅನಂತರ ಆ ಮುನಿಶ್ರೇಷ್ಠನು ಗಾಯಕೋತ್ತಮರಾದ ತ್ಯಾಗರಾಜರನ್ನು ಕುರಿತು ಹೀಗೆ ಹೇಳಿದನು—

'ನಿನ್ನ ಕೃತಿಗಳನ್ನು ವರ್ಣಿಸಲು ನನ್ನ ಬಳಿ ಯಾವ ಪದಗಳೂ ಇಲ್ಲ. ಇವುಗಳನ್ನು ಎಷ್ಟು ವರ್ಣಿಸಿದರೂ ಸಾಲದು. ಚತುರತೆ, ರಾಗ, ಆಲಾಪನೆ, ಶ್ರುತಿಸಾಂಗತ್ಯ ಹಾಗೂ ಮಧುರವಾಗಿರುವ ನಿನ್ನ ಈ ರೀತಿಯಾದ ವಿದ್ವತ್ತು ಹೆಚ್ಚು ಪರಿಶ್ರಮ ಪಟ್ಟವರಿಗೂ ದೊರೆಯಲಾರದು. ಸತ್ಪಾತ್ರನಲ್ಲಿ ರಾಘವನ ಅಂಕುಶವು ವಿನಿಯೋಗವಾಗಿರುವುದು ಎದ್ದುಕಾಣುತ್ತದೆ. ಈ ರೀತಿಯಾದ ಗೀತಗಳಿಂದ ಸಂತೋಷಗೊಂಡ ರಾಘವನು ನಿಶ್ಚಯ ವಾಗಿಯೂ ರಸಿಕನೇ ಸರಿ. ರಾಘವನು ಪ್ರಸನ್ನನಾಗಿ ನಿನ್ನ ಮನಸ್ಸಿನ ಇಚ್ಛೆಯನ್ನು ಶೀಘ್ರವಾಗಿ ನೆರವೇರಿಸುತ್ತಾನೆ. ಅವನ ಭಕ್ತರು ಎಲ್ಲಿ ಹಾಡುತ್ತಾರೆಯೋ ಅಲ್ಲಿ ಅವನು ವಾಸ ಮಾಡುತ್ತಾನೆ. ಈ ಭೂಮಿಯಲ್ಲಿ ಇನ್ನೆಲ್ಲೂ ಸಿಕ್ಕದ, ಈಗಾಗಲೇ ಜೀರ್ಣವಾಗಿ ಹೋಗುತ್ತಿರುವ ಈ ತಾಳೆಪತ್ರದ ಗಂಟನ್ನು ಸುರಕ್ಷಿತವಾಗಿ ನಿನ್ನ ಮನೆಯಲ್ಲಿಡು. ಇದು ಪ್ರಾಚೀನವಾದ ಒಂದು ಉದ್ಗ್ರಂಥ.

ನಾನು ಸ್ನಾನಮಾಡಿ ಮುಗಿಸಿ ಕೂಡಲೇ ನಿನ್ನ ಭಿಕ್ಷೆಯನ್ನು ಸ್ವೀಕರಿಸಲು ಉತ್ಸುಕ ನಾಗಿದ್ದೇನೆ.'

ಹೀಗೆಂದು ಹೇಳಿ ಆ ಗ್ರಂಥವನ್ನು ಆ ಯತಿಶ್ರೇಷ್ಠನು ತ್ಯಾಗರಾಜರಿಗೆ ನೀಡಿದನು. ಮತ್ತು ನಿಶ್ಚಿಂತೆಯಿಂದ ಹಸನ್ಮುಖನಾಗಿ ಹೊರಟುಹೋದನು.

ಸ್ನಾತ್ವಾಥ ಪೂಜಯಿತ್ವೇಶಂ ಪಾಚಯಿತ್ವಾಮೃತೋಪಮಮ್ ।
ತ್ಯಾಗರಾಜೋ ಯತೇರ್ಮಾರ್ಗಂ ಸೋತ್ಕಂಠಂ ಪ್ರತ್ಯವೈಕ್ಷತ ॥ ೪೩ ॥

ನ ವಿಪ್ರವರಸದ್ಮಾನಿ ನ ನದೀ ನೇಶ್ವರಾಲಯಃ ।
ನ ಪಂಥಾಸ್ತತ್ಯಜೇऽನೇನ ಯತ್ಯನ್ವೇಷಣಚಾರಿಣಾ ॥ ೪೪ ॥

'ದೃಷ್ಟನಷ್ಟಃ ಸ ಕರ್ಮಂದೀ ನ ಚೇಲ್ಲೋಚನಗೋಚರಃ ।
ನ ಭೋಕ್ಷ್ಯೇ ನಾಪಿ ಪಾಸ್ಯಾಮೀತ್ಯಸ್ಯಾಸೀದಾಶ್ರವೋ ದೃಢಃ' ॥ ೪೫ ॥

ತಾರಕೋತ್ಸುಕ ಸಂತುಷ್ಟ್ಯೈ ತಾರಕೇಶೋಽಪ್ಯುದಾಯಯೌ

ಅತಿಥ್ಯಲಾಭಶೋಕಾರ್ತಃ ಪತಿತೋ ರಾಮಸನ್ನಿಧೌ ।
ತದ್ಭಕ್ತಿಪಾರವಶ್ಯೇನ ಸ್ವಾಪಮಾಪ ಕ್ಷಣೇನ ಸಃ

ಇದಾದ ನಂತರ ಸ್ನಾನಮಾಡಿ, ದೇವರ ಪೂಜೆ ಮಾಡಿ, ಅಮೃತಸಮಾನವಾ
ಯನ್ನು ಮಾಡಿ, ಬಹಳ ಉತ್ಸುಕತೆಯಿಂದ ಯತಿಯ ದಾರಿಯನ್ನು ತ್ಯಾಗ
ಎದುರುನೋಡುತ್ತಿದ್ದರು. ಎಷ್ಟು ಹೊತ್ತಾದರೂ ಆ ಯತಿಯು ಬಾ
ಅವನನ್ನು ಮನೆಗಳಲ್ಲಿ, ನದಿಯ ಹತ್ತಿರ, ಈಶ್ವರಾಲಯದಲ್ಲಿ, ದಾರಿಯಲ್ಲಿ,
ಹುಡುಕಿದರು.

'ಈಗ ಯತಿಯು ಅದೃಶ್ಯನಾಗಿದ್ದಾನೆ. ಇಲ್ಲದಿದ್ದರೆ ನನಗೆ ಕಾಣಿಸಿಕೊಳ್ಳ
ಅವನು ಬಾರದಿದ್ದರೆ ನಾನು ಊಟ ಮಾಡಲಾರೆ, ನೀರನ್ನೂ ಸಹ ಕುಡಿಯಲಾರೆ
ದೃಢಸಂಕಲ್ಪ ಮಾಡಿದರು.

ಅನಂತರ ಆ ದಂಪತಿಗಳ ತಾಪವನ್ನು ಹೋಗಲಾಡಿಸಲೋ ಏನೋ
ಸೂರ್ಯನು ಮುಳುಗಿದನು. ತಾರಕಮಂತ್ರವನ್ನು ಜಪಿಸಲು ತೊಡಗಿ
ಸಂತೋಷಗೊಳಿಸಲೋ ಎಂಬಂತೆ ಚಂದ್ರನು ಉದಯಿಸಿದನು.

ಅತಿಥಿಯು ಸಿಗದೆ ಇದ್ದ ದುಃಖದಿಂದ ಬಹಳ ಚಿಂತಾಕ್ರಾಂತರಾದ ತ್ಯಾ
ಶ್ರೀರಾಮನ ಸನ್ನಿಧಿಯಲ್ಲಿದ್ದು, ಅವನ ಭಕ್ತಿಯ ಪರಮಾವಧಿಯಿಂದ ನಿದ್ರೆಹೋ

ತತ್ಸ್ವಪ್ನೇ ದದೃಶೇ ಭಿಕ್ಷುರ್ದೃಷ್ಟಪೂರ್ವೋ ಹಸನ್ಮುಖಃ ।
ಉವಾಚೈನಂ ಸಮುತ್ಥಾಪ್ಯಾಶ್ವಾಸಯನ್ ಯತಿಶೇಖರಃ

'ಅಹಮಸ್ಮಿ ತ್ವಯಾದೃಷ್ಟಃ ಸನ್ಯಾಸೀ ಧನ್ಯಜೀವನಃ ।
ನಾರದಾಖ್ಯಃ ಪ್ರಹೃಷ್ಟೋಽಸ್ಮಿ ತವ ಭಕ್ತಿಭರೈಃ ಶುಭೈಃ

ಮಯಾ ಯೋಽದಾಯಿ ತೇ ಗ್ರಂಥಃ ಸ ಸ್ವರಾರ್ಣವನಾಮಕಃ ।
ಸುರೇಷು ಸುಕೃತೋದ್ರಿಕ್ತ ವಿಭುಧೈಕ ಸುಬೋಧನಃ

ಆಮೂಲಾಗ್ರಂ ಸದಾಭ್ಯಸ್ಯೇಸ್ತಂ ಗ್ರಂಥಂ ಜ್ಞಾನವಾನಪಿ ।
ಯೇನಾತ್ರ ಸ್ವರವಿಜ್ಞಾನಾತ್ ಸ್ವರವಾಪ್ತಿರದುಃಶ್ರುತಾ

ಇತ್ಯಾದಿಶ್ಯ ದಯಾಸಿಂಧೌ ಬ್ರಹ್ಮಪುತ್ರೇ ತಿರೋಹಿತೇ ।
ಶ್ರೀರಾಮಬ್ರಹ್ಮಪುತ್ರೋಽಯಂ ಪ್ರಬುಧ್ಯೈನಮವಂದತ

ಅವರ ಸ್ವಪ್ನದಲ್ಲಿ ಹಿಂದೆ ನೋಡಿದ್ದ ಆ ಯತಿಶೇಖರನು ಹಸನ್ಮುಖನಾಗಿ
ಕೊಂಡು, ತ್ಯಾಗರಾಜರನ್ನು ಮೇಲಕ್ಕೆಬ್ಬಿಸಿ ಈ ಮಾತುಗಳನ್ನು ಹೇಳಿದನು :

'ನಿನ್ನಿಂದ ನೋಡಲ್ಪಟ್ಟ ನಾರದ ಎಂಬ ಹೆಸರಿನ ಧನ್ಯನಾದ ಸಂನ್ಯಾಸಿಯು

ದ್ದೇನೆ. ನಿನ್ನ ನಿಷ್ಠೆಯಿಂದ ಕೂಡಿದ ಭಕ್ತಿಯಿಂದ ಬಹಳ ಸಂತೋಷಗೊಂಡಿದ್ದೇನೆ.

ನಾನು ಕೊಟ್ಟಿರುವ ಗ್ರಂಥವು ಸ್ವರಾರ್ಣವ (ಸ್ವರಸಾಗರ) ಎಂಬ ಹೆಸರುಳ್ಳದ್ದು. ಪಂಡಿತರಿಗೆ ಸುಲಭವಾಗಿ ಸ್ವರಜ್ಞಾನ ಬರಲು ದೇವತೆಗಳ ಪುಣ್ಯಫಲದಿಂದ ದೊರೆತಿರುವಂತಹುದು. ಜ್ಞಾನಿಯಾದವನಿಗೂ ಸಹ ಈ ಗ್ರಂಥವನ್ನು ಆಮೂಲಾಗ್ರವಾಗಿ ಅಭ್ಯಾಸ ಮಾಡುವುದು ಕಷ್ಟಸಾಧ್ಯವಾಗಿದೆ. ಇದರಲ್ಲಿರುವ ಸ್ವರಜ್ಞಾನದ ಅರಿವಿನಿಂದ ಸ್ವರ್ಗವೇ ಲಭಿಸುತ್ತದೆ.'

ಹೀಗೆ ಹೇಳಿ ದಯಾಸಿಂಧುವೂ ಬ್ರಹ್ಮಪುತ್ರನೂ ಆದ ನಾರದನು ಅದೃಶ್ಯನಾಗಲು ರಾಮಬ್ರಹ್ಮಪುತ್ರನಾದ ತ್ಯಾಗರಾಜರು ಎಚ್ಚರಗೊಂಡು ಅವನಿಗೆ ನಮಸ್ಕರಿಸಿದರು.

ಕ್ಷಣಾತ್ ತದ್ದತ್ತಮುದ್ಗ್ರಂಥಂ ತಂ ವಿಲೋಕ್ಯ ಸ್ವರಾರ್ಣವಮ್
ಅವಂಧ್ಯಫಲಕಂ ಸ್ವಪ್ನಂ ತಮಮನ್ಯತ ಸಾದರಮ್ ॥ ೫೩ ॥

ಶ್ರೀರಾಮಕರುಣಾಂ ಭೂಯೋ ನಾರದಾನುಗ್ರಹಂ ತಥಾ ।
ಲಬ್ಧ್ವಾಯಂ ಮುಗ್ಧದುಃಸಾಧಂ ಕೃತಿನಂ ಸ್ವಮನ್ಯತ ॥ ೫೪ ॥

ಅಥ ಸ್ವರಾರ್ಣವಸ್ಯಾಸ್ಯ ಸಾಹಾಯ್ಯೇನ ಸ ಸಾತ್ವಿಕಃ ।
ತಂ ಸ್ವರಾರ್ಣವಮಾಲೋಡ್ಯ ತತ್ಪಾರಂ ಚಾಶ್ವತೀತರತ್ ॥ ೫೫ ॥

ತದನುಜ್ಞಾನಸಂಪನ್ನಸ್ತದನುಗ್ರಹ ಸಂಗ್ರಹಾತ್ ।
ಬಹುಭಿಃ ಕೃತಿಭೀ ರಾಮಂ ತುಷ್ಟಪೂರ್ವಮತೋಷಯತ್ ॥ ೫೬ ॥

ತದಾ ತದಾ ಕೃತಾ ಏತಾಃ ಕೃತಿನೋಽಸ್ಯ ಶುಭಾಃ ಕೃತೀಃ ।
ತತಸ್ತತಃ ಸಮಾಯಾತಾಃ ಸಮಗೃಹ್ಣನ್ ಸಮೋ ಬುಧಾಃ ॥ ೫೭ ॥

ಕೂಡಲೇ ನಾರದರಿಂದ ಕೊಡಲ್ಪಟ್ಟಿದ್ದ ಆ ಸ್ವರಾರ್ಣವವೆಂಬ ಗ್ರಂಥವನ್ನು ನೋಡಿ ತನ್ನ ಸ್ವಪ್ನವು ಸತ್ಯವಾದುದೆಂದು ತಿಳಿದರು. ಪುನಃ ತನ್ನ ಮೇಲೆ ಶ್ರೀರಾಮನ ಕೃಪಾ ಕಟಾಕ್ಷ ಹಾಗೂ ನಾರದರ ಅನುಗ್ರಹವು ಲಭಿಸಿದುದು ಮತ್ತು ಸಾಧಾರಣರಿಗೆ ಅಲಭ್ಯವಾದ ಆ ಕೃತಿಯು ತನ್ನದಾಯಿತೆಂದು ತಿಳಿದರು.

ತರುವಾಯ ಆ ಸಾತ್ವಿಕಶಿಖಾಮಣಿಯು ಆ ಉದ್ಗ್ರಂಥದ ಸಹಾಯದಿಂದ ಸ್ವರ ಸಮುದ್ರವನ್ನು ಸುಲಭವಾಗಿ ದಾಟಿ ಆಚೆಕಡೆಯ ತುದಿಯನ್ನು ಸೇರಿದರು. ಅದರಲ್ಲಿದ್ದ ಅಪಾರ ಜ್ಞಾನರಾಶಿಯಿಂದ ತ್ಯಾಗರಾಜರು ಅನೇಕ ಕೃತಿಗಳನ್ನು ರಚಿಸಿ, ಶ್ರೀರಾಮಚಂದ್ರನನ್ನು ಹಿಂದೆ ಸಂತೋಷಗೊಳಿಸಿದ್ದಂತೆ ಪುನಃ ಸಂತೋಷಗೊಳಿಸಿದರು.

ಆಗಾಗ ರಚಿಸುತ್ತಿದ್ದ ಅತ್ಯಂತ ಶುಭಕರವಾದ ಇವರ ಕೃತಿಗಳೆಲ್ಲವೂ ಪುನಃಪುನಃ ಎಲ್ಲ ಬುದ್ಧಿವಂತರಿಂದ ಮಾನ್ಯಮಾಡಲ್ಪಟ್ಟವು.

ಪ್ರತ್ಯಹಂ ಪ್ರಾತರುತ್ಥಾಯ ಸ್ನಾತಃ ಪೂತಮನಾ ಹರಿಮ್ ।
ತಂಬುರುಶ್ರುತಿಪಾತ್ರಸ್ಥೈರ್ಹರಿಭಕ್ತಿ ಸುಗಂಧಿಭಿಃ ॥ ೫೮ ॥

ಬಹುರಾಗಗುಣಪ್ರೋತೈಃ ಕೃತಿಪುಷ್ಪೈಃ ಸಮಾರ್ಚಯತ್
ಪತ್ರಂ ಪುಷ್ಪಂ ಫಲಂ ಕ್ಷೀರಂ ಸರ್ವಂ ಭಕ್ತ್ಯಾ ಸಮಾರ್ಚಿತವಾನ್ ॥ ೫೯ ॥

ಪರಿವಾರವೃತಾಯಾಸ್ಮೈ ರಾಘವಾಯ ನ್ಯವೇದಯತ್ ।
ಏಲಾಕ್ರಮುಕಜಾಜೀಭಿಃ ಸುಗಂಧಿತ ಚೂರ್ಣಿತೈಃ ॥ ೬೦ ॥

ಜಾನಕೀಕರಸಂಮೃಷ್ಟೈಸ್ತಾಂಬೂಲೈಸ್ತಮನಂದಯತ್ ।
ಉಪಚಾರೇಷು ಸರ್ವೇಷು ದಿವಾ ದೋಷಾ ಚ ಪೂಜನೇ ॥ ೬೧ ॥

ಬಹುಶಃ ಸ್ವಕೃತೀರ್ಗಾಯನ್ ತುಷ್ಟಾವೇಶಂ ಮಹಾಕವಿಃ ।
ಬ್ರಾಹ್ಮೇ ಮುಹೂರ್ತ ಉತ್ಥಾಯ ಸ್ನಾತೇನ ಕೃತಿನಾಽಮುನಾ ॥ ೬೨ ॥

ಶ್ರೀರಾಮಭುಕ್ತಶೇಷಶ್ಚ ತಾಂಬೂಲೋಚ್ಛಿಷ್ಟಮೇವ ಚ ।
ಅತಿಪೂತಮಪುಣ್ಯಾನಾಂ ದುರಾಪಂ ಪ್ರಾಪ ಚಾನ್ವಹನ್ ॥ ೬೩ ॥

ಉಪೋಷಿತಃ ಸಪತ್ನೀಕಃ ಸರ್ವತ್ರ ಹರಿವಾಸರೇ ।
ದ್ವಾದಶ್ಯಾಂ ಬ್ರಾಹ್ಮಣೈಃ ಸಾಕಂ ಪಾರಣಾಂಚ ಮುದಾಽಕರೋತ್ ॥ ೬೪ ॥

ವೃಂದಾವನ ಮಹಾಪುಣ್ಯ ದ್ವಾದಶ್ಯಾಂ ಪ್ರಿಯಯಾ ಸಹ ।
ದೇವೀಂ ತಾಂ ತುಲಸೀಂ ಗೇಹೇ ಕೀರ್ತನೈರಪ್ಯ ಪೂಜಯತ್ ॥ ೬೫ ॥

ಪಂಚಾಪಗೇಶದೇವಸ್ಯ 'ಸಪ್ತಸ್ಥಾನ' ಮಹೋತ್ಸವೇ ।
ಸ್ವಶಿಷ್ಯೈಃ ಸಹಿತೋ ಭಕ್ತ್ಯೈರ್ಭಜನ್ ಕ್ಷೇತ್ರಾಟನಂ ವ್ಯಧಾತ್ ॥ ೬೬ ॥

ನಿಮೇಷಮೇಕಮಪ್ಯೇಷ ನಿಷ್ಫಲಂ ಜಾತ್ವಯಾಪಯನ್ ।
ಅವಸ್ಥಾಸ್ವಪಿ ಸರ್ವಾಸು ರಾಮಮೇವ ಸದಾ ಭಜತ್ ॥ ೬೭ ॥

ಪ್ರತಿ ಬೆಳಿಗ್ಗೆ ಎದ್ದು ಸ್ನಾನ ಮಾಡಿ, ಶುದ್ಧಮನಸ್ಕರಾಗಿ, ತಂಬೂರಿಯನ್ನು ಶೃತಿ ಮಾಡಿಕೊಂಡು, ಭಕ್ತಿರಸಪೂರಿತವಾದ ಹಾಡುಗಳಿಂದ ಹರಿಯ ಅರ್ಚನೆ ಮಾಡುತ್ತಿದ್ದರು. ಅನೇಕ ರಾಗಗಳಿಂದ ಕೂಡಿ ಓತಪ್ರೋತವಾಗಿರುವ ಕೃತಿಪುಷ್ಪಗಳಿಂದ ಚೆನ್ನಾಗಿ ಅರ್ಚನೆ ಮಾಡಿ, ಜೊತೆಯಲ್ಲಿ ಪತ್ರ, ಪುಷ್ಪ, ಹಣ್ಣು, ಹಾಲು ಇತ್ಯಾದಿ ಎಲ್ಲವನ್ನೂ ಭಕ್ತಿಯಿಂದ ಶ್ರೀಹರಿಗೆ ಸಮರ್ಪಿಸುತ್ತಿದ್ದರು. ಎಲ್ಲವನ್ನೂ ರಾಘವನಿಗೆ ನಿವೇದನೆ ಮಾಡಿ ತನ್ನ ಕುಟುಂಬಪರಿವಾರ ಸಮೇತ ಅನೇಕ ಪುಷ್ಪ ಮತ್ತು ಸುಗಂಧವನ್ನು ಸಮರ್ಪಿಸುತ್ತಿದ್ದರು.

ಜಾನಕಿಯ ಹಸ್ತದಲ್ಲಿರಿಸಿದ ತಾಂಬೂಲದಿಂದ ಶ್ರೀರಾಮನನ್ನು ಸಂತುಷ್ಟಿಗೊಳಿಸಿ, ಎಲ್ಲಾ ವಿಧವಾದ ಷೋಡಶೋಪಚಾರಗಳಿಂದ ಹಗಲೂರಾತ್ರಿ ಪೂಜಿಸುತ್ತಿದ್ದರು. ಸಾಮಾನ್ಯವಾಗಿ ಈ ಮಹಾಕವಿಯು ತನ್ನ ಕೃತಿಗಳನ್ನು ಹಾಡುತ್ತ ಸಂತೋಷದಿಂದ ಅದರಲ್ಲೇ ಮೈಮರೆಯುತ್ತಿದ್ದರು. ಬ್ರಾಹ್ಮೀ ಮುಹೂರ್ತದಲ್ಲೇ ಎದ್ದು ಸ್ನಾನ ಮಾಡು

ತ್ತಿದ್ದ ಇವರಿಂದ ಈ ಕೃತಿಗಳ ಗಾಯನವು ನಡೆಯುತ್ತಿತ್ತು.

ಶ್ರೀರಾಮನು ಉಂಡು ಉಳಿದ, ಅಳಿದುಳಿದ ತಾಂಬೂಲದ ಅವಶೇಷದಿಂದ ಒಳ್ಳೆಯ ಕರ್ಮಗಳನ್ನು ಮಾಡದೆ ಇರುವವರಿಗೆ ದುರ್ಲಭವಾದುವುಗಳನ್ನು ತಾನು ಗಳಿಸುತ್ತಿದ್ದರು.

ಪ್ರತಿ ಏಕಾದಶಿಯಲ್ಲಿ ಪತ್ನಿಯೊಡನೆ ಉಪವಾಸ ಮಾಡಿ ದ್ವಾದಶಿಯಲ್ಲಿ ಬ್ರಾಹ್ಮಣರೊಡನೆ ಸೇರಿ ಅವರನ್ನು ತೃಪ್ತಿಗೊಳಿಸಿ ತಾನು ಸಂತೋಷಪಡುತ್ತಿದ್ದರು. ಉತ್ಥಾನ ದ್ವಾದಶಿಯ ಪುಣ್ಯದಿನದಂದು ತನ್ನ ಪ್ರಿಯೆಯೊಡನೆ ತುಳಸಿಯನ್ನು ತನ್ನ ಮನೆಯಲ್ಲಿ ಪೂಜಿಸಿ, ಕೀರ್ತನೆಗಳಿಂದ ಆರಾಧಿಸುತ್ತಿದ್ದರು. ಪಂಚನದೇಶ್ವರನ ಸಪ್ತಸ್ಥಾನ ಮಹೋತ್ಸವದಲ್ಲಿ ತನ್ನ ಶಿಷ್ಯರೊಡಗೂಡಿ, ಭಕ್ತವೃಂದದೊಡನೆ ಭಕ್ತಿಯಿಂದ ಭಜಿಸುತ್ತಾ ಕ್ಷೇತ್ರ ಪ್ರದಕ್ಷಿಣೆ ಮಾಡುತ್ತಿದ್ದರು. ಹೀಗೆ ತ್ಯಾಗರಾಜರು ಒಂದು ನಿಮಿಷವನ್ನೂ ಸಹ ವ್ಯರ್ಥ ಮಾಡದೆ ಯಾವಾಗಲೂ, ಎಲ್ಲಾ ಅವಸ್ಥೆಗಳಲ್ಲೂ ಶ್ರೀರಾಮನನ್ನೇ ಭಜಿಸುತ್ತಾ, ಜಪಿಸುತ್ತಾ ಇರುತ್ತಿದ್ದರು.

ಇತಿ ಸ ವಿಜ್ಞಗಣೇಡಿತಪಾಟವೋ
ಹರಿಪದಾಂಬುಜಸೇವನಲಾಲಸಃ ।
ಸಕಲಲೋಕಮನೋಹರಚರ್ಯಯಾ
ಭುವಿ ಲಲಾಸ ಕಲಾಸದನಾತ್ಮಕಃ ॥ ೬೮ ॥

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ಪಂಚಮ ಸರ್ಗಃ

ಹೀಗೆ ಬುದ್ಧಿವಂತರಿಂದ ಪ್ರಶಂಸಿಸಲ್ಪಟ್ಟು, ಯಾವಾಗಲೂ ಹರಿಯ ಪಾದಕಮಲಗಳ ಸೇವೆಯಲ್ಲಿ ನಿರತರಾದ, ಸಕಲರಿಗೂ ಸಂತೋಷವನ್ನುಂಟುಮಾಡುತ್ತಿದ್ದ, ಸಂಗೀತ, ಸಾಹಿತ್ಯಾದಿಗಳಲ್ಲಿ ಪರಿಣತಿ ಪಡೆದಿದ್ದ ಈ ತ್ಯಾಗರಾಜರು ಈ ಭೂಮಿಯಲ್ಲಿ ಪ್ರಕಾಶಿಸುತ್ತಿದ್ದರು.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ಐದನೆಯ ಸರ್ಗವು

## ಪದಾರ್ಥ ಚಂದ್ರಿಕಾ

## ಸರ್ಗ ಐದು

೧. ಪಂಚಯಂನ್ . , . —ತನ್ನ ಕೃತಿಗಳಿಂದ ವಿವರಣೆ ನೀಡುತ್ತಾ.

೨. ವಂದಾರವಃ—ವಂದನೆಗೆ ಯೋಗ್ಯರು. ಆನರ್ಚ—ಪೂಜಿಸಿದನು.

೮. ನೀಲಾಂಬರೀಗಾನೈಃ—ನೀಲಾಂಬರಿ ಎಂಬ ರಾಗವಿಶೇಷದಿಂದ. ನಿದ್ರೆ
ಈ ರಾಗವನ್ನು ಬಳಸಲಾಗುತ್ತದೆ.

೧೨. ತೇ—ಅವನ ಮೇಲೆ ಅಸೂಯೆಪಡುವ ಮೂರ್ಖರು.

೧೭. ರೀಣ ತೈಲೇನ—ಪ್ರಸ್ಯನ್ನ ತೈಲದಿಂದ.

೧೯. ಕರ್ಮಂದೀ—ಸಂನ್ಯಾಸಿ.

೨೨. ಭವತಃ—ಸಂಸಾರದಿಂದ ತಾರಕನಾದ, ಭವತೇ—ನಿನಗೆ.

೩೧. ಕೃತಕೃತ್ಯಕಂ—ವಿದ್ವಾಂಸನನ್ನು.

೩೩. ರಾಮಪ್ರೀತಿ ಕೃತೇ—ರಾಮಪ್ರೀತಿಯನ್ನು ಉದ್ದೇಶಿಸಿ ರಚಿಸಲ್ಪಟ್ಟ.

೪೫. ಆಶ್ರವಃ—ಪ್ರತಿಜ್ಞೆ.

೪೬. ತಾರಕೋತ್ಸುಕಃ—ತಾರಕಮಂತ್ರದಲ್ಲಿ-ಜಪದಲ್ಲಿ ಉತ್ಸಾಹವುಳ್ಳವನ
ಕೇಶಃ—ನಕ್ಷತ್ರೇಶನಾದ ಚಂದ್ರ.

೫೧. ಅದುಶ್ಯತಾ—ಸುಲಭವಾದುದು.

೫೭. ಸಮೋ—ಸರ್ವರೂ.

೬೩. ಅಪುಣ್ಯಾನಾಂ—ಪುಣ್ಯ ಮಾಡದಿರುವವರಿಗೆ. ದುರಾಸಂ—ಅಸಾಧ್ಯವಾ

೬೪. ಹರಿವಾಸರೇ—ಏಕಾದಶೀ ತಿಥಿ.

೬೫. ವೃಂದಾವನ ದ್ವಾದಶೀ—ಒಂದು ದ್ವಾದಶೀ ತಿಥಿ. ಅಂದು ವೃಂದಾ
ಎತ್ತರದ ಪೀಠದ ಮೇಲೆ ಬೆಳೆಸಿದ ತುಳಸಿಯ ಪೂಜೆ, ವಂದನೆ ಮೊದಲಾದುವು
ತ್ತವೆ.

೬೬, ಪಂಚಾಪಗೇಶಃ—ಪಂಚನದೇಶ್ವರ.

೬೮. ಕಲಾಸದನಾತ್ಮಕಃ—ಸಂಗೀತಸಾಹಿತ್ಯಾದಿ ಕಲೆಗಳ ಆಲಯಸ್ವರೂಪದ
ಳ್ಳವನು.

ದೈವತಂ ದೇವತಾನಾಂ ಯಃ ಸಂಪದಾಂ ಸಂಪದುತ್ತಮಾಃ ।
ತಮೇವ ರಾಘವಂ ಭಕ್ತ್ಯಾಧ್ಯಾಯತಃ ಸ್ತುವತಃ ಸದಾ ॥ ೧ ॥

ತಸ್ಯಾಗಾಯಕರಾಜಸ್ಯ ತ್ಯಾಗರಾಜಸ್ಯ ಧೀಮತಃ ।
ಅಮಲಾ ಹ್ಯತುಲಾ ಕೀರ್ತಿಸ್ತ್ರಿಲೋಕೀಮತ್ಯರಿಚ್ಯತ್ ॥ ೨ ॥

ಕಲಾಭಿರಕಲಂಕಾಭಿಃ ಸತ್ಪಥೇಽಸ್ಮಿನ್ ವಿರಾಜತಿ ।
ತ್ಯಾಗರಾಜೇ ಮಹಾರಾಜಚಕೋರಾಸ್ತೃಪ್ತಿಮಾಯಯುಃ ॥ ೩ ॥

ತಂಜಾಪುರೇನರಾಧೀಶಃ ಶರಭೋಜಿಮಹೀಪತಿಃ।
ಏತಸ್ಯ ಗೀತಿಮಾಧುರ್ಯಾತ್ ಪ್ರಾಪತುಷ್ಟಿಂ ತಥಾವಿಧಾಮ್ ॥ ೪ ॥

ಯಥಾಶು ತ್ಯಾಗರಾಜಂ ತಂ ನಿಜಾಸ್ಥಾನವಿಭೂಷಣಮ್ ।
ವಿಧಯ್ಯೈಚ್ಛದ್ ಗೀತಮಾತ್ಮಸ್ತಾವಕಂ ತನ್ಮುಖಾತ್ತು ಸಃ ॥ ೫ ॥

ತದರ್ಥ ಭೃತ್ಯವರ್ಗೇಶಂ ತ್ಯಾಗರಾಜಪ್ರಿಯಂ ದ್ವಿಜಮ್ ।
ಸಂಪ್ರೇಷ್ಯ ತ್ಯಾಗರಾಜಂ ತಂ ಸಮಾನೇತುಂ ತದಾದಿಶತ್ ॥ ೬ ॥

ಸ ತು ವಿಪ್ರೋ ವಿರಕ್ತೇಽಸ್ಮಿನ್ ತ್ಯಾಗರಾಜೇ ತಥಾ ವಿಧಾಮ್ ।
ರಾಜಾಜ್ಞಾಂ ವಕ್ತುಕಾಮಃ ಸನ್‌ಚಿರಂ ಕಾಲಮಯಾಪಯತ್ ॥ ೭ ॥

ಕದಾಚಿತ್ ಸ್ವಯಮೇವಾಯಂ ಯದಾ ತಂ ಧರಣೀಪತಿಮ್ ।
ಪ್ರಶಶಂಸ ತದೈವಾಸ್ಯ ಚಿಚ್ಛೇದಾಶಯಮಸ್ಪೃಹಃ ॥ ೮ ॥

‘‘ಚೂತಂ ತ್ಯಕ್ತ್ವಾ ಯಥಾ ಭೃಂಗೋ ನೈವ ವಾಂಛತಿ ನಿಂಬಕಮ್ ।
ಸಂತಾಪೇಽಪ್ಯಾತಪಾದೇವ ವಿಕಸತ್ಯಂಬುಜಂ ತಥಾ ॥ ೯ ॥

ತಥೈವ ಭಗವದ್ಭಕ್ತಃ ಏಕ್ವಚಿತ್ತೋ ಗತಸ್ಪೃಹಃ ।
ದೀನೋಽಪಿ ಗುಣಹೀನಂ ತು ನಾಶ್ರಯೇತ ಮಹಾಧನಮ್ ॥ ೧೦ ॥

ರಾಮಸನ್ನಿಧಿತೋಽನ್ಯೋ ಮೇ ನಿಧಿರ್ಜಾತು ನ ರೋಚತೇ ।
ಇತ್ಯುಪನ್ಯಸ್ಯ ತಸ್ಯಾಶಾಂ ಖಂಡಯಾಮಾಸ ಪಂಡಿತಃ ॥ ೧೧ ॥

ಮಂದಮಂದಂ ಹತಾಶೋಽಸೌ ವಿಪ್ರಃ ಪ್ರಾಪ್ಯ ನರೇಶ್ವರಮ್ ।
ರಾಮೈಕಚರಣಾಸಕ್ತಿಂ ತ್ಯಾಗರಾಜಸ್ಯ ಚಾವದತ್ ॥ ೧೨ ॥

ನೆನ್ನು ಬಹಳ ಭಕ್ತಿಯಿಂದ ಧ್ಯಾನ ಮಾಡುತ್ತಾ ಯಾವಾಗಲೂ ಸ್ತೋತ್ರವನ್ನು ಪಠಿಸು ತ್ತಿದ್ದರು. ಗಾಯಕರಾಜನಾದ ತ್ಯಾಗರಾಜರ ಬುದ್ಧಿವಂತಿಕೆಯು ಪರಿಶುದ್ಧ ಹಾಗೂ ವಿಪುಲವಾಗಿದ್ದು ಎಲ್ಲೆಲ್ಲೂ ಪಸರಿಸಿತು. ಕಳಂಕರಹಿತವಾದ ಕಲೆಗಳಿಂದ ಸನ್ಮಾರ್ಗದಲ್ಲಿ ಇವರ ಕೀರ್ತಿಯು ವಿರಾಜಿಸಲು ಆಕಾಶದಲ್ಲಿರುವ ಚಕೋರಪಕ್ಷಿಗಳೂ ಸಹ ತೃಪ್ತಿಯನ್ನು ಹೊಂದಿದುವು.

ತಂಜಾವೂರಿನ ರಾಜನಾದ ಶರಭೋಜಿ ಮಹಾರಾಜನು ಇವರ ಸಂಗೀತಮಾಧುರ್ಯ ದಿಂದ ಸಂತೋಷ ಪಡೆದು ಆ ತ್ಯಾಗರಾಜರನ್ನು ತನ್ನ ಆಸ್ಥಾನಕ್ಕೆ ಅಲಂಕಾರಪ್ರಾಯವ ನ್ನಾಗಿ ಮಾಡಿ, ಕೀರ್ತನೆಗಳನ್ನು ಕೇಳಲು ಇಚ್ಛಿಸಿದನು. ಅವರಿಗೆ ಪ್ರಿಯನಾದ ಹಾಗೂ ತನ್ನ ಸೇವಕವರ್ಗದ ಮುಖ್ಯಸ್ಥನಾದ ಬ್ರಾಹ್ಮಣನನ್ನು ಅವರನ್ನು ಕರೆತರಲು ಆಜ್ಞಾಪಿಸಿ ದನು. ಆ ಬ್ರಾಹ್ಮಣನಾದರೋ ವಿರಕ್ತರಾಗಿರುವ ತ್ಯಾಗರಾಜರಿಗೆ ರಾಜಾಜ್ಞೆಯನ್ನು ತಿಳಿಸಲು ಇಚ್ಛಿಸಿದವನಾಗಿ ಅದಕ್ಕಾಗಿ ಬಹಳ ಸಮಯ ಕಾಯುತ್ತಿದ್ದನು. ಯಾವುದೋ ಒಂದು ಸಂದರ್ಭದಲ್ಲಿ ಆ ಭೂಪಾಲನನ್ನು ಸ್ವತಃ ಪ್ರಶಂಸಿಸಿ ರಾಜಾಜ್ಞೆಯನ್ನು ತಿಳಿಸಿ ದನು. ಆಗ ತ್ಯಾಗರಾಜರು ಹೀಗೆ ಹೇಳಿದರು :

"ಮಾವಿನ ಮರವನ್ನು ಬಿಟ್ಟು ಹೇಗೆ ಭ್ರಮರವು ನಿಂಬೆ ಗಿಡವನ್ನು ಇಷ್ಟಪಡುವು ದಿಲ್ಲವೋ, ಬಿಸಿಲಿನ ತಾಪವನ್ನು ಸಹಿಸಿ ಹೇಗೆ ಕಮಲವು ಅರಳುವುದಿಲ್ಲವೋ, ಹಾಗೆ ಸ್ಥಿರಮನಸ್ಸುಳ್ಳ ಭಗವದ್ಭಕ್ತನು ಬಡವನಾದರೂ ಹೆಚ್ಚು ಹಣವಂತನನ್ನು ಯಾವಾಗಲೂ ಆಶ್ರಯಿಸುವುದಿಲ್ಲ. ಶ್ರೀರಾಮಸನ್ನಿಧಿಯನ್ನು ಬಿಟ್ಟು ಬೇರೆಲ್ಲಿಗೆ ಹೋಗುವುದೂ ನನಗೆ ಹಿಡಿಸುವುದಿಲ್ಲ."

ಈ ರೀತಿ ಹೇಳಿದ ತ್ಯಾಗರಾಜರ ಆಶಯವನ್ನು ಆ ಪಂಡಿತನು ಖಂಡಿಸಿ, ನಿರಾಶೆ ಗೊಂಡು ಬೇರೆ ದಾರಿ ಕಾಣದೆ ರಾಜನ ಬಳಿಗೆ ಹಿಂತಿರುಗಿದನು. ತ್ಯಾಗರಾಜರ ರಾಮ ಚರಣ ಸೇವೆಯ ಒಂದೇ ಗುರಿಯನ್ನು ರಾಜನಿಗೆ ತಿಳಿಸಿದನು.

ತದಾಕರ್ಣ್ಯ ಮಹಾಕೋಪಪೈಶಾಚಾವಿಷ್ಟಮಾನಸಃ ।
ಮೂಢಃ ಸ ತ್ಯಾಗರಾಜಂ ತಂ ಬಲಾದಾನೇತುಮಾಗ್ರಹಾತ್ ॥ ೧೩ ॥

ವ್ಯಯೀಕೃತ್ಯ ಧನಂ ಭೂರಿ ಭಟಾನ್ ಧೀರಾನ್ ಸಮಾದಿಶನ್ ।
ಯೇಷಾಂ ಸಾಹಸ ಧೈರ್ಯಾದ್ಯಾ ಗುಣಾ ಅನ್ಯತ್ರ ರೇಜಿರೇ ॥ ೧೪ ॥

ತೇ ಭಟಾಸ್ತ್ಯಾಗರಾಜಸ್ಯ ಭವನಂ ಪರಿತಃ ಸ್ಥಿತಾಃ ।
ಶ್ರೀರಾಮಭಜನಂ ಶ್ರುತ್ವಾ ತ್ವಸ್ವಗಾಯನ್ ವಶಂಗತಾಃ ॥ ೧೫ ॥

ತಾದೃಕ್ಷಮಹಿಮೋಪೇತಂ ಬಲಾದ್ ದುಗ್ರಹಮಸ್ಪೃಹಮ್ ।
ಅವೇತ್ಯ ಖಂಡಿತಾಶಾಸ್ತೇ ತಚ್ಛಿಷ್ಯಾ ನ ತತೋ ಯಯುಃ ॥ ೧೬ ॥

ಅದನ್ನು ಕೇಳಿ ಅತ್ಯಂತ ಕೋಪಾವೇಶದಿಂದ ಆ ಮೂರ್ಖನು ಬಲವಂತವಾಗಿ ಅವರನ್ನು ಕರೆತರುವಂತೆ ಆಜ್ಞಾಪಿಸಿ, ಬಹಳ ಹಣವನ್ನು ಖರ್ಚು ಮಾಡಿ ಧೈರ್ಯಶಾಲಿಗಳಾದ ಭಟರನ್ನು ಕಳುಹಿಸಿದನು. ಆ ಭಟರು ತ್ಯಾಗರಾಜರ ಮನೆಯ ಸುತ್ತಲೂ ಬಂದು ಸೇರಿದರು. ಅಲ್ಲಿ ನಡೆಯುತ್ತಿದ್ದ ಶ್ರೀರಾಮಭಜನೆಯನ್ನು ಕೇಳಿ ಅನುಸರಿಸುತ್ತಾ ಅದರಲ್ಲೇ ತಲ್ಲೀನರಾಗಿಹೋದರು. ಅಂತಹ ಮಹಿಮಾನ್ವಿತರ ಹತ್ತಿರಕ್ಕೆ ಹೋದರಾದರೂ ಬಲಾತ್ಕಾರವಾಗಿ ಅವರನ್ನು ಕರೆದುಕೊಂಡು ಹೋಗಲು ಆಗಲಿಲ್ಲ. ತ್ಯಾಗರಾಜರ ಶಿಷ್ಯರು ಆ ಭಟರನ್ನು ಚೆನ್ನಾಗಿ ಖಂಡಿಸಲು ಅವರು ವಾಪಸ್ಸು ಹೋದರು.

ಏಕಾವದಂತರೇ ಮೂರ್ಖಃ ಶರಭೋಜಿ ಮಹೀಪತಿಃ ।
ಸರ್ವಭೇಷಜ ದುರ್ವಾರಾಂ ಶೂಲಾಂ ಪ್ರಾಪ್ಯ ನಿಜೋದರೇ ॥ ೧೭ ॥

ವಿವ್ಯಥೇ ತ್ಯಾಗರಾಜಸ್ಯ ಪೀಡನೋತ್ಥಮಹಾಫಲಮ್ ।
ತದೇತತ್ ತತ್ಕೃಪಾಲೇಶಮಾತ್ರಶಕ್ಯನಿವಾರಣಮ್ ॥ ೧೮ ॥

ಭಿಷಜಾ ಮಾಂತ್ರಿಕೇಣಾಪಿ ಕಥಂ ನಾಮ ನಿವಾರ್ಯತೇ ।
ಪರಿವಭ್ರಾಮ ರಾಜಾಯಂ ವಹ್ನಿಪಾತಿತ ಕೀಟವತ್ ॥ ೧೯ ॥

ಏತನ್ಮಧ್ಯೆ ಮೂರ್ಖನಾದ ಶರಭೋಜಿ ಮಹಾರಾಜನಿಗೆ ಯಾವ ಔಷಧೋಪಚಾರಗಳಿಂದಲೂ ಗುಣಮಾಡಲು ಸಾಧ್ಯವಾಗದ ಹೊಟ್ಟೆನೋವು ಬಂದಿತು. ತ್ಯಾಗರಾಜರಿಗೆ ತೊಂದರೆ ಕೊಟ್ಟು ದುಃಖ ಉಂಟುಮಾಡಿದ್ದರ ಫಲವಾಗಿ ಅವರ ಕೃಪೆಯಿಂದ ಮಾತ್ರ ಹೋಗಲಾಡಿಸಬಹುದಾದ ನೋವು ಆ ರಾಜನಿಗೆ ಬಂದಿತು. ವಿಷಯವು ಹೀಗಿರುವಾಗ ವೈದ್ಯರು ಮತ್ತು ಮಾಂತ್ರಿಕರಿಂದ ಹೇಗೆ ತಾನೇ ಆ ರೋಗವನ್ನು ಗುಣಮಾಡಲು ಸಾಧ್ಯ ? ಆ ರಾಜನು ಬೆಂಕಿಗೆ ಬೀಳುವ ಕೀಟದಂತೆ ಬಹಳ ಕಷ್ಟಪಡಬೇಕಾಯಿತು.

ತ್ಯಾಗರಾಜಪ್ರಭಾವಜ್ಞಃ ಕಶ್ಚಿದ್ ವಿಜ್ಞಸ್ತತೋಽವದತ್ ।
ತ್ಯಾಗರಾಜಸ್ಯ ರಾಮೈಕನಿತ್ಯಭಕ್ತಸ್ಯ ಧೀಮತಃ ॥ ೨೦ ॥

ಪೀಡನೇ ನೈವ ಭೋ ರಾಜನ್ ದುಃಸ್ಥಿತಿಸ್ತೇಽಜನೀದೃಶೀ ।
ಶರಣೀಕರಣೀಯೋಽತಃ ಸ ಏವ ಮಹಿಮೋಜ್ಜ್ವಲಃ ॥ ೨೧ ॥

ದಯಾಳುಃ ಸೋಽಪರಾಧಂ ತೇ ನೂನಂ ಕ್ಷಾಮ್ಯತಿ ಸಾತ್ವಿಕಃ ।
ಇತಿ ಶ್ರುತ್ವಾ ಕ್ಷಣೇನಾಸೌ ಪ್ರಾಣಾಶಾ ಬಂಧುರಾಂತರಃ ॥ ೨೨ ॥

ತ್ಯಾಗರಾಜಾಂತಿಕಂ ಗಂತುಂ ನಿಶ್ಚಿಕಾಯ ಕಥಂಚನ ।
ತತಃ ಪೂರ್ವಂ ತು ಸಾ ಶೂಲಾ ಮಹಾವ್ಯಾಧಿಸ್ತಿರೋಽದಧೇ ॥ ೨೩ ॥

ಏತೇನ ತ್ಯಾಗರಾಜಸ್ಯ ಮಹಿಮಾನಂ ವಿತರ್ಕ್ಯ ಸಃ ।
ಉತ್ಪ್ಲುತ್ಯ ತ್ಯಾಗರಾಜಸ್ಯ ಪದಾಂಭೋಜಯುಗೇಽಪತತ್ ॥ ೨೪ ॥

ಸ್ವಾಪರಾಧಮಿಮಂ ಕ್ಷಂತುಂ ಪ್ರಾರ್ಥ್ಯ ಭೂಯೋ ನನಾಮ ಚ ।
ಅಗಾಧಮಹಿಮೋಪೇತಂ ಕ್ಷುದ್ರಾರ್ಥತ್ಯಾಗಿನಂ ಬುಧಮ್ ॥ ೨೫ ॥

ಕಥಂ ಸ ಧನಮಾತ್ರಾರ್ಥ್ಯಸ್ತರ್ಪಯೇದ್ಭಕ್ತಿಮಂತರಾ ।
ಅತಃ ಪುನಃ ಪುನಸ್ತ್ವೇನಂ ಪ್ರಣಮ್ಯೈತತ್ಕೃತಾಃ ಕೃತೀ ॥ ೨೬ ॥

ಸ್ವಯಂ ಚ ಭಕ್ತಿತೋ ಗಾಯನ್ ತ್ಯಾಗರಾಜಪ್ರಿಯೋಽಭವತ್ ।
ಶ್ರೇಯಾಂಸಿ ರಾಜದತ್ತಾನಿ ತ್ಯಾಗರಾಜೇ ತ್ಯಜತ್ಯಲಮ್ ॥ ೨೭ ॥

ಆಗ ಬುದ್ಧಿವಂತನೊಬ್ಬನು ರಾಜನಿಗೆ ಈ ರೀತಿ ಹೇಳಿದನು : ``ಇದು ತ್ಯಾಗರಾಜರ ಪ್ರಭಾವವೇ ಸರಿ. ಶ್ರೀರಾಮನ ಪರಮಭಕ್ತರೂ, ಬುದ್ಧಿವಂತರೂ ಆದ ಅವರಿಂದ ನಿನಗೆ ಈ ನೋವು ಉಂಟಾಗಿದೆ. ಎಲೈ ರಾಜನೇ ! ಈ ನೋವನ್ನು ತಪ್ಪಿಸಿಕೊಂಡು, ಈ ದುಃಸ್ಥಿತಿಯಿಂದ ಪಾರಾಗಲು, ನೀನು ಆ ಮಹಿಮಾವಂತನಾದ ತ್ಯಾಗರಾಜರಿಗೆ ಶರಣು ಹೋಗುವುದು ಒಳ್ಳೆಯದು. ದಯಾಳುವೂ, ಸಾತ್ವಿಕನೂ ಆದ ಅವರು ನಿಶ್ಚಯ ವಾಗಿ ನಿನ್ನ ಅಪರಾಧವನ್ನು ಕ್ಷಮಿಸುತ್ತಾರೆ.''

ಇದನ್ನು ಕೇಳಿದ ಮಹಾರಾಜ ಆ ಕ್ಷಣದಲ್ಲಿಯೇ ತನ್ನ ಪ್ರಾಣವನ್ನು ಉಳಿಸಿ ಕೊಳ್ಳುವ ಆಸೆಯಿಂದ ತ್ಯಾಗರಾಜರ ಬಳಿ ಹೋಗಲು ಸಂಕಲ್ಪ ಮಾಡಿದನು. ಈ ಸಂಕಲ್ಪಮಾತ್ರದಿಂದಲೇ ಅವನ ಹೊಟ್ಟೆನೋವು ಮಾಯವಾಯಿತು. ಇದರಿಂದ ಅವರ ಮಹಿಮೆಯನ್ನು ಚೆನ್ನಾಗಿ ತಿಳಿದವನಾಗಿ, ಅವರ ಬಳಿಗೆ ಬಂದು ಅವರ ಪದಕಮಲಗಳಿಗೆ ಎರಗಿ, ತಾನು ಮಾಡಿದ ಅಕ್ಷಮ್ಯ ಅಪರಾಧವನ್ನು ಕ್ಷಮಿಸುವಂತೆ ಪ್ರಾರ್ಥಿಸಿದನು. ಕ್ಷುದ್ರವಾದುವುಗಳನ್ನು ತ್ಯಾಗಮಾಡಿರುವ, ಅಗಾಧ ಮಹಿಮೆಯಿಂದ ಕೂಡಿದ ತ್ಯಾಗರಾಜರು ಭಕ್ತಿಯನ್ನು ಬಿಟ್ಟು ಹಣಕ್ಕೆ ಹೇಗೆ ತಾನೇ ಒಲಿದಾರು ಎಂಬು ದನ್ನೂ ಅರಿತು, ಪುನಃಪುನಃ ನಮಸ್ಕರಿಸಿ, ತಾನೂ ಸಹ ಬಹಳ ಭಕ್ತಿಯಿಂದ ಹಾಡುತ್ತಾ ಅವರಿಗೆ ಬಹಳ ಪ್ರಿಯವಾದವನಾದನು.

ರಾಜನು ನೀಡುವ ಧನಕನಕಾದಿಗಳು ತ್ಯಾಗರಾಜರಲ್ಲಿ ತ್ಯಾಗಕ್ಕೆ ಯೋಗ್ಯವಾದುವು ಗಳಲ್ಲವೆ ?

ಜಪ್ಯೇಶೋ ದ್ರವ್ಯಮಾತ್ರಾರ್ಥೀ ಶಶಾಪೈನಂ ನಿಜಾನುಜಮ್ ।
ದುರ್ಲಭೋ ರಾಜಸಮ್ಮಾನಃ ಸಾಧಾರಣಜನೈಃ ಪರೈಃ ॥ ೨೮ ॥

ಅನಾಯಾಸೇನ ತತ್ಪ್ರಾಪ್ಯಾಪ್ಯೇಷ ಹಂತ ತ್ಯಜತ್ಯಹೋ ।
ಅಸಂಗೃಹ್ಯ ಧನಂ ಲಬ್ಧಂ ಭಕ್ತಾಭಾಸಾನ್ ಪರಃ ಶತಾನ್ ॥ ೨೯ ॥

ಪ್ರತ್ಯಹಂ ಭೋಜಯನ್ನೇಷ ದ್ರವಿಣಂ ಮೇ ವಿನಾಶಯೇತ್ ।
ಏತೇನ ನಾರ್ಜ್ಯತೇ ಕಿಂಚಿದ್ ದೀಯತೇ ತು ಮದರ್ಜಿತಮ್ ॥ ೩೦ ॥

ದುಃಶ್ರವಸ್ಸ್ವರವಃ ಸರ್ವಾನ್ ಗೇಹೇ ಬಧಿರಯತ್ಯಸೌ ।
ನೈವಂ ವಿಧೈರ್ವೃಥಾ ದಾನೈರ್ನಾಪ್ನುಚ್ಛ್ಯೈಃ ಕ್ರೋಶನ್ನೈಃ ಕ್ವಚಿತ್ ॥ ೩೧ ॥

ಪ್ರೀಯತೇ ಭಗವಾನ್ ಕಿಂತು ವಕ್ಷ್ಯೋ ಮಾನಸಿಕಾದರಾತ್ ।
ತಾವದ್ಧಿ ದುಃಸಹಃ ಸೋಽಯಂ ಸಂಭ್ರಮೋ ಭವಿತಾ ಗೃಹೇ ॥ ೩೨ ॥

ಯಾವದಸ್ಯಾರ್ಚನಾಮೂರ್ತೀ ರಾಮೋ ದೂರಾನ್ನ ಹಾರ್ಯತೇ ।
ಅತೋಽಹಂ ಪ್ರತಿಮಾಃ ಸರ್ವಾ ಏತತ್ಪ್ರಾಣಸಮಾ ಇಮಾಃ ॥ ೩೩ ॥

ಪ್ರಕ್ಷೇಪ್ಸ್ಯಾಮಿ ರಹೋ ದೂರೇ ಕಥಂಚಿತ್ ಸೌಖ್ಯಲಬ್ಧಯೇ ।
ಇತಿ ನಿಶ್ಚಿತ್ಯ ಸ ಜ್ಯೇಷ್ಠಸ್ತಮೋಗುಣಾ ವಿಜೃಂಭಿತಃ ॥ ೩೪ ॥

ದ್ರವ್ಯವನ್ನು ಮಾತ್ರ ಅಪೇಕ್ಷಿಸುವ ಜಪ್ಯೇಶನು ತನ್ನ ತಮ್ಮನಾದ ತ್ಯಾಗರಾಜರನ್ನು ಹೀಗೆ ಶಪಿಸಿದನು : "ಸಾಧಾರಣ ಜನರಿಗೆ ರಾಜಸನ್ಮಾನವು ಅತ್ಯಂತ ದುರ್ಲಭ. ಅನಾಯಾಸವಾಗಿ ಈ ರೀತಿಯ ಸನ್ಮಾನವು ಇವನಿಗೆ ಲಭಿಸಿದರೂ ಈ ರೀತಿ ತ್ಯಜಿಸುತ್ತಿರುವನಲ್ಲ ! ಅಯ್ಯೋ ! ಏನು ಮಾಡುವುದು ? ದೊರಕಿದ ಹಣವನ್ನು ಸಂಗ್ರಹಿಸದೆ ನೂರಾರು ಭಕ್ತಜನರನ್ನು ನೋಡಿಕೊಳ್ಳುವುದಾದರೂ ಹೇಗೆ ? ಪ್ರತಿದಿನವೂ ಊಟ ಹಾಕಿ ನನ್ನ ಹಣವೆಲ್ಲ ಹಾಳಾಯಿತು. ಇವನು ಒಂದು ಸ್ವಲ್ಪವೂ ಹಣ ಗಳಿಸುವುದಿಲ್ಲ. ಆದ್ದರಿಂದ ನನ್ನಿಂದ ಗಳಿಸಲ್ಪಡುವುದೆಲ್ಲ ಇವನಿಂದ ವ್ಯಯವಾಗುತ್ತಿದೆ.

"ಮನೆಯಲ್ಲಿ ಎಲ್ಲರನ್ನೂ ಸೇರಿಸಿಕೊಂಡು, ಕೇಳಲು ಸಾಧ್ಯವಿಲ್ಲದ ಧ್ವನಿಯಲ್ಲಿ ಕೂಗುತ್ತಾ, ಕೂಗಿಸುತ್ತಾ ನನ್ನನ್ನು ಕಿವುಡನಾಗಿ ಮಾಡಿದ್ದಾನೆ. ವ್ಯರ್ಥವಾಗಿ ದಾನ ಮಾಡುವುದು, ಕೆಲವು ಸಲ ಜೋರಾಗಿ, ಕೆಲವು ಸಲ ಮೆಲ್ಲನೆ ಹಾಡುವುದು ಇವನ ಕೆಲಸವಾಗಿದೆ. ಇದರಿಂದ ಭಗವಂತನಿಗೆ ಹೇಗೆ ಪ್ರೀತಿಯಾಗುತ್ತದೋ ನನಗೆ ಗೊತ್ತಿಲ್ಲ. ಇವನು ಕೆಲವು ಸಲ ಬುದ್ಧಿ ಕೆಟ್ಟಿರುವವನಂತೆ ಕಾಣುತ್ತಾನೆ. ಇವನ ಈ ಕಾರ್ಯಗಳನ್ನು, ಮನೆಯಲ್ಲಿನ ಈ ಸಂಭ್ರಮಗಳನ್ನು ಸಹಿಸುವುದು ಬಹಳ ಕಷ್ಟವಾಗಿದೆ.

"ಇವನ ಈ ಅರ್ಚನಾಮೂರ್ತಿಯಾದ ರಾಮನನ್ನು ದೂರಕ್ಕೆ ಒಯ್ಯುವವರೆಗೂ ನನಗೆ ನೆಮ್ಮದಿ ಸಿಕ್ಕುವುದಿಲ್ಲ. ಆದ್ದರಿಂದ ಇವನ ಪ್ರಾಣಕ್ಕೆ ಸಮಾನವಾದ ಈ ಮೂರ್ತಿಗಳನ್ನು ದೂರ ಕೊಂಡೊಯ್ಯಬೇಕು. ನನ್ನ ಸುಖಶಾಂತಿಗೋಸ್ಕರ ಗುಟ್ಟಾಗಿ ಇವುಗಳನ್ನು ಬಚ್ಚಿಡುತ್ತೇನೆ."

ಹೀಗೆ ಯೋಚಿಸಿ ಆ ಹಿರಿಯ ಸಹೋದರನು ತಮೋಗುಣದಿಂದ ವಿಜೃಂಭಿಸಿದನು.

ತಮಿಸ್ರಾಯಾಂ ತು ಸರ್ವೇಷು ಸುಪ್ತೇಷು ಭುವಿ ಜಂತುಷು ।
ಶ್ರೀರಾಮವಿಗ್ರಹಂ ಚಾರುಂ ಚೌರ್ಯೇಣೋದ್ಧೃತ್ಯ ಸತ್ವರಮ್ ॥ ೩೫ ॥

ಗ್ರಾಮಾದ್ ದೂರತರಂ ಗತ್ವಾ ಕಾವೇರೀತೀರಮಾಸ್ಥಿತಃ ।
ಅದಯಃ ಸಭಯೋ ರಾಮಂ ಪ್ರವಾಹೇ ತೀರರೋಧಿನಿ ॥ ೩೬ ॥

ಪ್ರಚಿಕ್ಷೇಪ ನದೀಮಧ್ಯೇ ರತ್ನರಾಶಿಂ ಕಪಿರ್ಯಥಾ ।
ಪಾಷಂಡಸ್ತು ಯಥಾಮ್ನಾಯಂ ಪುರೋಡಾಶಂ ಯಥಾ ವೃಕಃ ॥ ೩೭ ॥

ಗಾಂಗಂ ತೋಯಂ ಯಥಾ ಚಶ್ವಾ ತಥೈವಾಯಮಿಮಂ ವಿದನ್ ।
ಸನ್ನಿಧೌ ತ್ಯಾಗರಾಜಸ್ಯ ಗಾನಾಮೃತರಸೋತ್ಸವಃ ॥ ೩೮ ॥

ವಿಯೋಗೇಽಪ್ಯಸ್ಯ ದುಃಖೋತ್ಥವಿಯೋಷ ಕವಿತಾಂ ಹರಿಃ ।
ಕವೇರತನಯಾ ಸ್ವಾದುಕ್ಷೀರಪೂರಾಭಿಲಾಷುಕೈಃ ॥ ೩೯ ॥

ಮತ್ಸ್ಯಕೂರ್ಮಾದಿಭೀ ರಮ್ಯೈರ್ಜಂತುಭಿರ್ವಿಹರಂಸ್ತಥಾ ।
ಕ್ಷೀರಾಬ್ಧಿಶಯನಃ ಶ್ರೀಮಾನ್ ಪಯೋಧಾವಿವ ರಾಘವಃ ॥ ೪೦ ॥

ಅತ್ರಾಪ್ಯುದ್ರಿಕ್ತಸೌಖ್ಯೇನ ಪ್ರಭುರ್ಹಾಯನಮಾವಸತ್ ।
ರಾಮೇಣ ಸಕಲಜ್ಞೇನ ಕರುಣಾಂಬುಧಿನಾ ತದಾ ॥ ೪೧ ॥

ಶಿಲೇವ ನಿಷ್ಪ್ರಭಾವೇಣ ಚಿರಂ ತಸ್ಥೇ ಮಹಾತ್ಮನಾ ।
ವಿಶ್ವೋತ್ಪತ್ತಿಸ್ಥಿತಿಧ್ವಂಸಾ ಯದೀಯೇಚ್ಛಾ ವಿಜೃಂಭಿತಮ್ ॥ ೪೨ ॥

ತಾದೃಶಂ ನಾಶಿತಂ ಮತ್ವಾ ಸಮೂರ್ಖೋ ಮುಮುದೇಪರಮ್ ।
ನಿಶೀಥೇ ಸ್ವಂ ಗೃಹಂ ಪ್ರಾಪ್ಯ ಯಥಾಪೂರ್ವಮಸೌ ಖಿಲಃ ॥ ೪೩ ॥

ರಾತ್ರಿ ಎಲ್ಲರೂ ನಿದ್ರಿಸುತ್ತಿರುವಾಗ, ನಿರ್ದಯನೂ, ಭಯವಿಲ್ಲದವನೂ ಆದ ಅವನು ಸುಂದರವಾದ ಶ್ರೀರಾಮಮೂರ್ತಿಯ ವಿಗ್ರಹವನ್ನು ಬೇಗ ಅಪಹರಿಸಿ, ಗ್ರಾಮದಿಂದ ಬಹಳ ದೂರ ಕಾವೇರಿ ತೀರಕ್ಕೆ ಹೋಗಿ, ನೀರಿನಲ್ಲಿ ಇಳಿದು, ಕಪಿಯು ರತ್ನರಾಶಿಯನ್ನು ಬಿಸಾಡುವಂತೆ ಆ ಶ್ರೀರಾಮನನ್ನು ನೀರಿನ ಮಧ್ಯದಲ್ಲಿ ಹಾಕಿದನು. ಚಾರ್ವಾಕರು ಹೇಗೆ ಸ್ವರ್ಗವನ್ನು ತಿರಸ್ಕರಿಸುತ್ತಾರೋ, ತೋಳವು ಹೇಗೆ ರೊಟ್ಟಿಯನ್ನು ಬಿಸಾಕುವುದೋ ಹಾಗೆ ಅವನ ಈ ಚರ್ಯೆಯಿತ್ತು. ನಾಯಿಯು ಹೇಗೆ ಗಂಗೆಯ ನೀರನ್ನು ಪರಿಗಣಿಸುವುದೋ ಹಾಗೆ ತ್ಯಾಗರಾಜರನ್ನು ತಿಳಿದು, ತ್ಯಾಗರಾಜಸ್ವಾಮಿಯ ಸನ್ನಿಧಿಯಲ್ಲಿದ್ದೂ ಗಾನಾಮೃತದ ರಸದೌತಣವನ್ನು ಅವನು ಸವಿಯಲಾಗದವನಾಗಿದ್ದನು.

ತ್ಯಾಗರಾಜರ ವಿಯೋಗದಿಂದ ಶ್ರೀಹರಿಯು ಕವಿತೆಗಳಿಲ್ಲದೆ ದುಃಖಿಗೊಳ್ಳುತ್ತಾನೆ. ಕವಿಯು ಅರ್ಪಿಸುತ್ತಿದ್ದ ಸಿಹಿಯಾದ ಹಾಲು ಇತ್ಯಾದಿಗಳಿಲ್ಲದವನಾಗುತ್ತಾನೆ. ಈಗ ಮೀನು, ಆಮೆ ಮತ್ತು ಇತರ ಸುಂದರವಾದ ಜಲಚರಗಳೊಡನೆ ವಿಹರಿಸುತ್ತಾ ಪಯೋಧದಂತೆ ಶ್ರೀರಾಮನು ಕ್ಷೀರಾಬ್ಧಿಶಯನನಾಗಿರಬಹುದು.

ಕರುಣಾಸಾಗರನಾದ, ಎಲ್ಲವನ್ನೂ ತಿಳಿದಿರುವ ಅವನು ಉದ್ರಿಕ್ತವಾದ ಆ ನದಿಯಲ್ಲಿಯೂ ಸಹ ಸುಖವಾಗಿದ್ದನು.

ಮಹಾತ್ಮನಾದ ಯಾವನ ಇಚ್ಛಾಮಾತ್ರದಿಂದಲೇ ಸೃಷ್ಟಿ, ಸ್ಥಿತಿ, ಲಯಗಳಾಗುವುವೋ ಅಂತಹವನನ್ನು ಕುರಿತು ಬಹಳ ಹೊತ್ತು. ಕಲ್ಲಿನಂತೆ, ನಿಷ್ಕ್ರಿಯನಾಗಿ ನೋಡುತ್ತ ನಿಂತಿದ್ದನು ಜಪ್ಯೇಶ. ಆ ರೀತಿಯಾದ ನಾಶವನ್ನು ತಿಳಿದೂ ಆ ಮೂರ್ಖನು ಬಹಳ ಸಂತೋಷಪಟ್ಟಿದ್ದಲ್ಲದೆ, ಆ ಖಳನು ರಾತ್ರಿಯಲ್ಲೇ ಮನೆಗೆ ಬಂದು ಎಂದಿನಂತೆ ಇದ್ದುಬಿಟ್ಟನು.

ಅದೋಷ ಇವ ನಿದ್ರಾಲುಃ ಸ್ವಾತ್ಮಾನಂ ಪ್ರಶಶಂಸ ಚ ।
ಅಥ ದುಃಸ್ವಪ್ನಮಗ್ನಾತ್ಮಾ ರಾಮಹಾನಿಂ ವಿತರ್ಕಯನ್ ॥ ೪೪ ॥

ಸ್ನಾತ್ವಾಶು ಮಂದಿರೇ ರಾಮಂ ಸೋತ್ಕಂಠಂ ದ್ರಷ್ಟುಮಾಗಮತ್ ।
ತದಾನೀಂ ರಾಘವೋ ಹಂತ ತದಕ್ಷ್ಣೋಃ ಪಟುನೋರಪಿ ॥ ೪೫ ॥

ವಿಷಯೋ ನಾಭವಚ್ಚಿತ್ತೇ ಪ್ರತಿಬಿಂಬಿತ ವಿಗ್ರಹಃ ।
ಸರ್ವ ಸದ್ಮ ಸಮಾಂ ವೀಥೀಂ ವಿಮೃಗ್ಯಾಪಿ ಹತಾತ್ಮನಾ ॥ ೪೬ ॥

ತ್ಯಾಗರಾಜೇನ ತೇನಾಪೇ ದುಃಖಮಾತ್ರಂ ಸುದುಃಸಹಮ್ ।
ವಾಪೀಕೂಪತಟಾಕೇಷು ಸರ್ವತ್ರಾನ್ವಿಷ್ಯ ಸಾದರಮ್ ॥ ೪೭ ॥

ಶ್ರೀರಾಮವಿರಹೋತ್ತಪ್ತೋ ಬುಭುಜೇ ನ ಪಪೌ ನ ಚ ।
ನ ಸ್ವಾಪೇ ನಾಪಿ ಚೈಕತ್ರ ಸ್ಥಿತೌ ತಸ್ಯ ಮನೋಽಭವತ್ ॥ ೪೮ ॥

ಯದ್ಯದ್ ದದರ್ಶ ತತ್ ಸರ್ವಂ ರಾಮಭ್ರಾಂತ್ಯಾ ತಮಾದ್ರಿಯತ್ ।
ಜಾತು ಜಪ್ಯೇಶದಾರಾಣಾಂ ಮುಖೋತ್ಥಾನ್ನಿಜದೂಷಣಾತ್ ॥ ೪೯ ॥

ವಿವೇದ ಸರಿದಿ ಕ್ಷಿಪ್ತಂ ಮತ್ಸರಾದಗ್ರಜನ್ಮನಾ ।
ಪೂರ್ಣಪ್ರವಾಹಿನೀಂ ದೇವೀಂ ಕಾವೇರೀಮವರುಹ್ಯ ಸಃ ॥ ೫೦ ॥

ತ್ಯಕ್ತದೇಹಾಭಿಲಾಷೋಽಯಂ ರಾಮಮನ್ವಿಷ್ಯ ದುಃಖಿತಃ ।
ಅನ್ವಿಷ್ಯಾನ್ವಿಷ್ಯ ಲೋಷ್ಠಾದೀನ್ ನಿಃಸಾರಾರ್ಥಾನ್ ಪರಂ ವ್ರಜನ್ ॥ ೫೧ ॥

ರಾಮವಿಗ್ರಹದ ಹಾನಿಯನ್ನು ಯೋಚಿಸುತ್ತಾ, ದೋಷರಹಿತನಂತೆ ತನ್ನನ್ನು ತಾನೇ ಹೊಗಳಿಕೊಳ್ಳುತ್ತಿರುವ ಜಪ್ಯೇಶನನ್ನು ತ್ಯಾಗರಾಜರು ದುಃಸ್ವಪ್ನದಲ್ಲಿ ನೋಡಿ ಖಿನ್ನರಾದರು. ಕೂಡಲೇ ಎದ್ದು ಸ್ನಾನಮಾಡಿ ಬಹಳ ಗಾಬರಿಗೊಂಡು ಶ್ರೀರಾಮನನ್ನು ನೋಡಲು ಮಂದಿರಕ್ಕೆ ಬಂದರು. ಅಲ್ಲಿ ಶ್ರೀರಾಮನನ್ನು ಕಾಣದೆ ಅತ್ಯಂತ ದುಃಖಿತರಾದ ಅವರ ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯತೊಡಗಿತು. ಮನಸ್ಸಿನಲ್ಲಿ ಶ್ರೀರಾಮ ವಿಗ್ರಹವನ್ನೇ ತುಂಬಿಕೊಂಡಿದ್ದ ಅವರಿಗೆ ಬೇರೇನೂ ಮನಸ್ಸಿಗೆ ಬಾರಲಿಲ್ಲ. ಎಲ್ಲಾ ಮನೆಗಳು, ಬೀದಿಗಳು, ಎಲ್ಲಾ ಕಡೆಗಳಲ್ಲೂ ಹುಡುಕಿ ಹತಾಶರಾದರು. ಇಂತಹ ದುಃಖವನ್ನು ಅವರಿಂದ ಸಹಿಸಲು ಸಾಧ್ಯವಾಗದೆ ಬಾವಿ, ಕೊಳ, ಕೆರೆ ಇತ್ಯಾದಿಗಳಲ್ಲಿ ಹುಡುಕಾಡಿದರು. ಶ್ರೀರಾಮಚಂದ್ರನ ವಿರಹದಿಂದ ಊಟ ಮಾಡಲಿಲ್ಲ, ಮಲಗಲಿಲ್ಲ, ಒಂದು ಕಡೆ ನಿಲ್ಲಲಿಲ್ಲ. ಯಾವುದನ್ನು ನೋಡಿದರೂ ರಾಮ ರಾಮ ಎಂಬ ಭ್ರಮೆಗೆ ಒಳಗಾಗುತ್ತಿದ್ದರು. ಹೀಗಾಯಿತು ಅವರ ಮನಸ್ಸಿನ ಸ್ಥಿತಿ.

ಜಪ್ಯೇಶನೊಡನೆ ಅವನ ಹೆಂಡತಿಯು ಇವರನ್ನು ದೂಷಿಸುತ್ತಿದ್ದುದನ್ನು ಕೇಳಿ ತ್ಯಾಗರಾಜರಿಗೆ ಪರಿಸ್ಥಿತಿಯು ಅರ್ಥವಾಯಿತು. ತನ್ನ ಅಣ್ಣನು ಹೊಟ್ಟೆಕಿಚ್ಚಿನಿಂದ

ಶ್ರೀರಾಮನ ವಿಗ್ರಹವನ್ನು ನದಿಗೆ ಎಸೆದಿದ್ದಾನೆ ಎಂದು ತಿಳಿದು ಕಾವೇರಿ ನದೀತೀರಕ್ಕೆ ಬಂದು ಅಲ್ಲಿರುವ ನಿಸ್ಸಾರವಾದ ಎಲ್ಲಾ ಲೋಹಗಳನ್ನೂ ಪರೀಕ್ಷಿಸುತ್ತಾ ಹುಡುಕುತ್ತಾ ಅತೀವವಾಗಿ ದುಃಖಿಗೊಂಡರು.

ಪೂರ್ಣಂ ನದೀಪ್ರವಾಹಂ ತಂ ಸ್ವಾಶ್ರುಪೂರೈರವರ್ಧಯತ್ ।
ಏಕಸ್ಮಿನ್ ವತ್ಸರೇ ಕ್ಷಿಪ್ತೇ ಕಥಂಚಿದ್ ದುಃಖಿನಾಮುನಾ ॥ ೫೨ ॥

ಕಾವೇರೀಪೂರ ಉತ್ಸಾರೇ ಹರಿಮಾನಸ ಆವಿಶತ್ ।
ಸಿಕತಾಪ್ರಚುರೇ ಜಾತೇ ನದೀಮಧ್ಯೇ ಮನೋಹರೇ ॥ ೫೩ ॥

ಜಾನುದಘ್ನೇ ಜಲೇ ರಾಮೋ ಬಹಿರ್ಗಂತುಂ ಮನೋ ದಧೇ ।
ತದ್ರಾತ್ರೌ ತ್ಯಾಗರಾಜಸ್ಯ ಸ್ವಪ್ನೇ ರಾಮಃ ಕೃಪಾನಿಧಿಃ ॥ ೫೪ ॥

ನಿಗೂಢಂ ನಿಜವಾಸ್ತವ್ಯಂ ಸಿಕತಾಂತನ್ಯವೇದಯತ್ ।
ಕ್ಷಣೇನ ಪ್ರಾಪ್ತವದ್ರಾಮಂ ಪರಮಾನಂದತುಂದಿಲಃ ॥ ೫೫ ॥

ಪ್ರಾಪ್ತಸ್ತಂ ದೇಶಮುತ್ಪ್ಲುತ್ಯ ನದೀಮಧ್ಯಮವಾತರತ್ ।
ರಾಮಪ್ರೋಕ್ತೇ ಸ್ಥಲೇ ಖಾತ್ವಾ ಸಿಕತಾ ಅಪಸಾರ್ಯ ಸಃ ॥ ೫೬ ॥

ರಾಘವಂ ಚಿರನಷ್ಟಂ ತಂ ಚಿರಂ ದೃಷ್ಟಿಪುಟೈಃ ಪಪೌ ।
ಏತಸ್ಯ ತ್ಯಾಗರಾಜಸ್ಯ ತಥಾಭೂತೋ ಮುದಾಂ ಭರಃ ॥ ೫೭ ॥

ನದಿಗೆ ಎಸೆಯಲ್ಪಟ್ಟ ಶ್ರೀರಾಮಮೂರ್ತಿಯನ್ನು ನೆನೆನೆನೆದು ದುಃಖಪೂರಿತರಾಗಿ ಒಂದು ದಿನ ನದಿಯ ಬಳಿಗೆ ಹೋದರು. ಇವರ ಅಶ್ರುಧಾರೆಯಿಂದ ಕಾವೇರಿಯ ಪ್ರವಾಹವೂ ಹೆಚ್ಚಿತು! ತುಂಬಿ ಹರಿಯುತ್ತಿದ್ದ ನದಿಯೆದುರು ಅವರು ಹರಿಮನಸ್ಕರಾದರು. ನದೀಮಧ್ಯದಲ್ಲಿ ಸುಂದರವಾದ ಮರಳಿನ ರಾಶಿಯನ್ನು ನೋಡಿದರು.

ಮಂಡಿ ನೆನೆಯುವಷ್ಟು ನೀರಿನಲ್ಲಿ ನಿಂತಿದ್ದ ಶ್ರೀರಾಮನು ಅಲ್ಲಿಂದ ಹೊರಬರುವ ಮನಸ್ಸು ಮಾಡಿದನು! ಆ ರಾತ್ರಿ ತ್ಯಾಗರಾಜರಿಗೆ ಸ್ವಪ್ನದಲ್ಲಿ ಕರುಣಾಮೂರ್ತಿಯಾದ ಶ್ರೀರಾಮನು ಕಾಣಿಸಿಕೊಂಡನು; ಮತ್ತು ತಾನು ಮರಳಿನ ರಾಶಿಯ ಮಧ್ಯೆ ಇರುವುದನ್ನು ತಿಳಿಸಿದನು. ಆ ಕ್ಷಣವೇ ಮೂರ್ತಿ ಸಿಕ್ಕಿದ ಸಂತೋಷದಿಂದ ಪರಮಾನಂದಭರಿತರಾದರು. ಬೆಳಿಗ್ಗೆ ಬೇಗ ಎದ್ದು ನದಿಯ ಮಧ್ಯಕ್ಕೆ ಹೋಗಿ, ಶ್ರೀರಾಮನು ಹೇಳಿದ ಸ್ಥಳದಲ್ಲಿ ಮರಳನ್ನು ಅಗೆದು ತೆಗೆದರು. ಬಹಳ ಕಾಲ ಕಳೆದುಕೊಂಡಿದ್ದಂತೆ ಭಾಸವಾದ ಆ ರಾಮಮೂರ್ತಿಯನ್ನು ನೋಡಿ ಅವರಿಗಾದ ಸಂತೋಷಕ್ಕೆ ಎಣೆಯೇ ಇರಲಿಲ್ಲ.

ಅನಿವಾರಪ್ರಸಾರೋಽಭೂದ್ ಬಹಿರ್ಗಾನಚ್ಛಲಾದ್ ಬಲಾತ್ ।
ಬಹೂನಿ ಕೀರ್ತನಾನ್ಯೇಷ ಗಾತ್ವಾ ತುಷ್ಟಾವ ರಾಘವಮ್ ॥ ೫೮ ॥

ಅಥತಂ ಗೇಹಮಾನೀಯ ಮಹಾಪ್ರೇಮ್ಣಾಽಭ್ಯಪೂಜಯತ್ ।
ಜಪ್ಯೇಶೇನ ವಿನ್ಯೆಕೇನ ಸರ್ವೇ ರಾಮಪ್ರಿಯಾ ಜನಾಃ ॥ ೫೯ ॥

ರಾಮೋಪಲಬ್ಧಿ ಸಂತುಷ್ಟಾಸ್ತ್ಯಾಗರಾಜಂ ತಮಸ್ತುವನ್ ।
ಸ ಮೂರ್ಖಃ ಶೋಕಭೀತೀ ತು ಯುಗಪತ್ ಪ್ರಾಪ್ಯ ವಿವ್ಯಥೇ ॥ ೬೦ ॥

ಉದಿತೇ ಭಾಸ್ಕರೇಽಪ್ಯೇತಿ ಕಿಂ ಮುದಂ ಕುಮುದಾವಲಿಃ ।
ಪೂರ್ವಾಧಿಕೇನ ಸ ಪ್ರೇಮ್ಣಾ ನಷ್ಟಲಬ್ಧಂ ರಮಾಪತಿಮ್ ॥ ೬೧ ॥

ಸಂತೋಷದಿಂದ ಅವರ ಬಾಯಿಂದ ಬಂದ ಅನೇಕ ಕೀರ್ತನೆಗಳಿಂದ ರಾಘವನನ್ನು ಸಂತೋಷಗೊಳಿಸಿ, ವಿಗ್ರಹವನ್ನು ಮನೆಗೆ ತಂದು ಬಹಳ ಪ್ರೀತಿಯಿಂದ ಪೂಜಿಸಿದರು. ಮೂರ್ತಿಯು ದೊರೆತದ್ದರಿಂದ ತ್ಯಾಗರಾಜರು ಬಹಳವಾಗಿ ಶ್ರೀರಾಮನನ್ನು ಸ್ತುತಿಸುತ್ತಿದ್ದರು. ಜಪ್ಯೇಶನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ರಾಮಪ್ರಿಯರಾಗಿ ಹೋದರು. ಆದರೆ ಮೂರ್ಖನಾದ ಜಪ್ಯೇಶನು ಶೋಕಭೀತಿಗಳಿಂದ ಕೂಡಿದವನಾಗಿ ಬಹಳ ವ್ಯಥೆಯನ್ನು ಅನುಭವಿಸಿದನು.

ಸೂರ್ಯೋದಯದಿಂದ ಕುಮುದಗಳು ಹೇಗೆ ಸಂತೋಷ ಹೊಂದುತ್ತವೋ ಅದರಂತೆ ಕಳೆದುಹೋದದ್ದು ದೊರೆಕಿದ್ದರಿಂದ ಹಿಂದಿಗಿಂತಲೂ ಹೆಚ್ಚಾದ ಪ್ರೀತಿಯಿಂದ ತ್ಯಾಗರಾಜರು ಶ್ರೀರಾಮನನ್ನು ಸ್ತುತಿಸಿದರು.

ಪೂಜಯನ್ ತ್ಯಾಗರಾಜೋಽಭೂದ್ ರಾಮಸೇವಾಹತಾತ್ಮಯಃ ।
ಅಥ ವಂಚಿ ಮಹೀಪಾಲಃ ಸ್ವಾತಿನಕ್ಷತ್ರ ಸಂಭವಃ ॥ ೬೨ ॥

ಏತಸ್ಯ ಗಾನನೈಪುಣ್ಯಂ ಶುಶ್ರಾವ ಶ್ರುತಪುಂಗವಃ ।
ತ್ಯಾಗರಾಜಸ್ಯ ಶಿಷ್ಯೇಭ್ಯಸ್ತತ್ಕೃತಿ ಸ್ವಾದಿಮೋದ್ಭರಮ್ ॥ ೬೩ ॥

ವಿಜ್ಞಾಯ ವಿಜ್ಞವರ್ಯೋಽಯಂ ನಿಮಮಂಜ ಮುದಂಬುಧೌ ।
ಆಢ್ಯಂ ತೃಣಾಯ ಮನ್ವಾನಂ ರಾಮಮಾತ್ರ ಶರಣ್ಯಕಮ್ ॥ ೬೪ ॥

ತಮಾಕರ್ಣ್ಯ ವಿರಕ್ತಾಗ್ರ್ಯಂ ಸ್ವಾತಿಭೂಪೋಽಭ್ಯನಂದಯತ್ ।
ವಿವಿಧಾಸು ಚ ಭಾಷಾಸು ರಾಗೇಷು ವಿವಿಧೇಷು ಚ ॥ ೬೫ ॥

ಸ್ವಕೃತಾಶ್ಚ ಕೃತೀರಸ್ಮೈ ಪ್ರೈಷಯದ್ ಗಾನವೇದಿನೇ ।
ತದಾಸ್ಥಾನಮಹಾವಿದ್ವಾನ್ ಸಂಗೀತಾಂಬುಧಿಪಾರಗಃ ॥ ೬೬ ॥

ಶ್ರೀ ಪದ್ಮನಾಭಭಕ್ತೋ ಯಃ ಶಾಂತಚೇತಾ ನೃಪೇರಿತಃ ।
'ಷಟ್‌ಕಾಲಗಾಯಿ ಗೋವಿಂದ ಮಾರಾರ್' ನಾಮಾಖ್ಯ ಸನ್ನಿಧೌ ॥ ೬೭ ॥

ಸ್ವಾತಿರಾಜಕೃತೀಃ ಕಶ್ಚಿದಗಾಯತ್ ಸಾದರಂ ತದಾ ।
ತಾಃ ಕೃತೀಃ ಪದ್ಮನಾಭೈಕಸ್ತೋತ್ರಸಕ್ತಲಸತ್ಪದಾಃ ॥ ೬೮ ॥

ಶೃಂಗಾರಾದಿರಸೋದ್ರಿಕ್ತಾಃ ಪ್ರಾಚ್ಯಲಕ್ಷ್ಮಾನುವರ್ತಿನೀಃ ।
ರಾಮಕೃಷ್ಣಾವತಾರಾದಿ ಮಾಹಾತ್ಮ್ಯಪ್ರತಿಪಾದಿನೀಃ ॥ ೬೯ ॥

[illegible]

ಪದ್ಮನಾಭಪದೇನ್ಯೈವ ಮುದ್ರಿತಾ ಬಹುಸಂಗತೀಃ ।
ಗೈರ್ವಾಣೀಪ್ರಚುರಾಃ ಶ್ರುತ್ವಾ ತ್ಯಾಗರಾಜೋ ಹ್ಯಮತ್ಸರಃ ॥ ೭೦ ॥

ಅಭಿನಂದ್ಯ ಪರಂ ತಸ್ಯ ವೈದುಷ್ಯಂ ಸರ್ವತೋಮುಖಮ್ ।
ಪತ್ರಮಪ್ಯೇಕಮಾಲಿಖ್ಯ ಪ್ರಾಹಿಣೋದ್ ಭೂಭುಜೇ ಮುದಾ ॥ ೭೧ ॥

ಅದ್ಯಾಪಿ ಪತ್ರಿಕಾ ಸಾಸ್ತಿ ಕೋಶೇ ವಂಚೀಶಿತುಃ ಪ್ರಭೋಃ ।
ಲಸಂತಿ ತ್ಯಾಗರಾಜೇತಿ ಯತ್ರ ನಾಮಾಕ್ಷರಾಣ್ಯಪಿ ॥ ೭೨ ॥

ಈ ರೀತಿ ಸದಾ ರಾಮಸೇವಾನಿರತರಾಗಿ ತ್ಯಾಗರಾಜರು ಪ್ರಕಾಶಿಸುತ್ತಿದ್ದಾಗ, ಸ್ವಾತಿ ನಕ್ಷತ್ರದಲ್ಲಿ ಜನಿಸಿದ ತಿರುವಾಂಕೂರಿನ ಮಹಾರಾಜನು ತ್ಯಾಗರಾಜರ ಶಿಷ್ಯರಿಂದ ಅವರ ಕೃತಿಗಳ ಗಾನಮಾಧುರ್ಯವನ್ನು ಹೀರಿ, ಅವರ ಗಾನನೈಪುಣ್ಯತೆಯನ್ನು ತಿಳಿದು, ಐಶ್ವರ್ಯವನ್ನು ತೃಣದಂತೆ ಕಾಣುವ, ರಾಮನ ಶರಣಾರ್ಥಿಯೂ, ಬುದ್ಧಿವಂತರೂ ಆದ ಅವರ ಬಗ್ಗೆ ತಿಳಿದುಕೊಂಡು, ಸಂತೋಷಸಾಗರದಲ್ಲಿ ಮುಳುಗಿ, ಅವರನ್ನು ಅಭಿನಂದಿಸಿದನು. ವಿವಿಧ ಭಾಷೆಗಳು ಮತ್ತು ರಾಗಗಳಲ್ಲಿ ಪಾಂಡಿತ್ಯ ಮತ್ತು ಘನತೆಯನ್ನು ಪಡೆದಿರುವ, ಸಂಗೀತಸಾಗರವನ್ನು ದಾಟಲು ಸಮರ್ಥರಾದ, ಗಾನಕೋವಿದರಾದ ಆಸ್ಥಾನವಿದ್ವಾಂಸರನ್ನು ತನ್ನ ಕೃತಿಗಳೊಂದಿಗೆ ಅವರ ಬಳಿಗೆ ಕಳುಹಿಸಿದನು.

ಪದ್ಮನಾಭನ ಭಕ್ತನೂ, ದೊರೆಯ ಇಂಗಿತವನ್ನು ಅರಿತವನೂ, ಶಾಂತಚಿತ್ತನೂ ಆಗಿದ್ದ ಷಟ್ಕಾಲ ಗೋವಿಂದ ಮಾರಾರ್ ಎಂಬ ವಿದ್ವಾಂಸನು, ಪದ್ಮನಾಭನಿಗೆ ಮಾತ್ರ ಸಂಬಂಧಿಸಿದ್ದ, ಅತ್ಯಂತ ಮುದ ನೀಡುತ್ತಿದ್ದ ಸ್ವಾತಿರಾಜನ ಕೃತಿಗಳನ್ನು ತ್ಯಾಗರಾಜರ ಸನ್ನಿಧಿಯಲ್ಲಿ ಹಾಡಿದನು. ಈ ಕೃತಿಗಳು ಶೃಂಗಾರಾದಿ ರಸಗಳಿಂದ ಕೂಡಿ, ಪ್ರಾಚೀನ ಪದ್ಧತಿಯ ಸಂಗೀತದ ಲಕ್ಷಣಗಳನ್ನು ಹೊಂದಿ, ರಾಮ, ಕೃಷ್ಣಾವತಾರಾದಿಗಳನ್ನು ಕುರಿತವುಗಳಾಗಿದ್ದುವು. ಹರಿಭಕ್ತಿಯೊಡನೆ, ಕಸ್ತೂರಿಯ ಪರಿಮಳದಂತೆ ಸಂಗೀತ ಕಲೆಯಿಂದ ಪ್ರಕಾಶಮಾನವಾಗಿದ್ದ ಈ ಕೃತಿಗಳು ಸ್ವರಸಾಹಿತ್ಯಗಳ ಗಂಭೀರವಾದ ಮೇಳದೊಡನೆ ಕೂಡಿದ್ದುವು. ಪದ್ಮನಾಭ ಎಂಬ ಹೆಸರಿನಿಂದಲೇ ಅನೇಕ ಸಂಗತಿಗಳು ತ್ಯಾಗರಾಜರ ಮನಸ್ಸಿನಲ್ಲಿ ಮುದ್ರಿತವಾದುವು. ಶುದ್ಧವಾದ ಸಂಸ್ಕೃತದ ಕೃತಿಗಳನ್ನು ಕೇಳಿದ ಅವರ ಮನಸ್ಸಿನಲ್ಲಿ ಲವಲೇಶವಾದರೂ ಮತ್ಸರವು ಹುಟ್ಟಲಿಲ್ಲ. ರಾಜನನ್ನು ಅಭಿನಂದಿಸಿ ಆ ಕೃತಿಗಳ ವಿದ್ವತ್ತನ್ನು ಎಲ್ಲಾ ರೀತಿಯಿಂದ ಪ್ರಶಂಸಿಸಿ ಬಹಳ ಸಂತೋಷದಿಂದ ಪತ್ರವೊಂದನ್ನು ಬರೆದು ಕಳುಹಿಸಿಕೊಟ್ಟರು.

ಈಗಲೂ ಸಹ ತಿರುವಾಂಕೂರು ದೊರೆಯ ಕೋಶಾಗಾರದಲ್ಲಿ ತ್ಯಾಗರಾಜರ ಸ್ವಹಸ್ತಲಿಪಿಯ ಈ ಪತ್ರವು ಶೋಭಿಸುತ್ತಿದೆ.

ಸ ಗೋವಿಂದಾಭಿಧೋ ವಿದ್ವಾನ್ ಗಾನೇ ನೈಜಾಂ ಚ ನೈಪುಣೀಮ್ ।
ಪ್ರದರ್ಶ್ಯ ತತ್ಪದೇ ನತ್ವಾ ಲಬ್ಧ್ವಾ ಸಾರ್ಥಾಸ್ತದಾಶಿಷಃ ॥ ೭೪ ॥

ತತ್ಪತ್ರಂ ಸ್ವಾತಿಭೂಪೇಂದ್ರೇ ಸಮರ್ಪ್ಯ ಪ್ರಶಶಂಸ ತಮ್ ।
ತಂಜಾಪುರನೃಪಾಹ್ವಾನಂ ತಿರಸ್ಕೃತ್ಯ ವಿರಕ್ತಿತಃ ॥ ೭೫ ॥

ವಿರಾಜಂತಮಿಮಂ ರಾಜ್ಯೇ ನೈಜೇ ವಿಂದೇತ್ ಕಥಂ ನೃಪಃ ।
ತಾದೃಶಂ ತಸ್ಯ ವೈರಾಗ್ಯಂ ವಿಜ್ಞಾಯಾಯಂ ಮಹೀಪತಿಃ ॥ ೭೬ ॥

ಗೋವಿಂದನೆಂಬ ಹೆಸರಿನ ಆ ವಿದ್ವಾಂಸನು ಗಾನದಲ್ಲಿ ನಿಜವಾದ ನಿಪುಣತೆಯನ್ನು ಗಳಿಸಿದ್ದನು. ತನ್ನ ಕಿಂಚಿತ್ ವಿದ್ವತ್ತನ್ನು ತ್ಯಾಗರಾಜರ ಪದಕಮಲಗಳಲ್ಲಿ ಪ್ರದರ್ಶಿಸಿ, ನಮಿಸಿ, ಅವರ ಆಶೀರ್ವಾದದಿಂದ ಜೀವನಸಾರ್ಥಕತೆಯನ್ನು ಪಡೆದುಕೊಂಡನು.

ಆ ಪತ್ರವನ್ನು ಸ್ವಾತಿ ಭೂಪಾಲನಿಗೆ ಕೊಟ್ಟು, ತಂಜಾವೂರಿನ ದೊರೆಯ ಆಹ್ವಾನವನ್ನು ವಿರಕ್ತಿಯಿಂದ ತಿರಸ್ಕರಿಸಿದ್ದ ತ್ಯಾಗರಾಜರನ್ನು ಹೊಗಳಿ, ಆ ವೈರಾಗ್ಯ ಮೂರ್ತಿಯು ಆ ರಾಜ್ಯದಲ್ಲಿ ಶೋಭಾಯಮಾನವಾಗಿರುವುದನ್ನು ತಿಳಿಸಿದನು.

ಮಂದಭಾಗ್ಯಂ ಬತಾತ್ಮಾನಂ ಸ್ವರಾಜ್ಯಂ ಚಾಪ್ಯಮನ್ಯತ ।
ಅಥ ಗೋವಿಂದಮಾರಾರ್ ಸಃ ಪಂಡರೀಪುರ ಮೀಯಿವಾನ್ ॥ ೭೭ ॥

ಯತ್ರಾಮುಂ ತ್ಯಾಗರಾಜಂ ಸ್ವೈಃ ಕೀರ್ತನೈರಪ್ಯವರ್ಣಯತ್ ।
ಕದಾಚಿದ್ ದ್ವಿಜವರ್ಯೋಽಗಾತ್ ಪೂತಾದ್ ವಾರಾಣಸೀಪುರಾತ್ ॥೭೮॥

ರಾಮದಾಸಾಭಿಧಃ ಸಿಂಧೌ ಸೇತುದರ್ಶನದೀಕ್ಷಿತಃ ।
ಚೋಳದೇಶಂ ಯದಾಯಾಸೀತ್ ತತ್ಸ್ವಪ್ನೇಽಪಿ ತದಾ ಹರಿಃ ॥ ೭೯ ॥

ಉಪೇತ್ಯ ತ್ಯಾಗರಾಜಂ ತಂ ದ್ರಷ್ಟುಮೇತಮುಪಾದಿಶತ್ ।
ಸೋಽಪ್ಯಾಗತ್ಯ ಹರಾದೇಶಾದ್ ರಾಮದಾಸೋ ಜಿತೇಂದ್ರಿಯಃ ॥ ೮೦ ॥

ರಾಮದಾಸಮಿಮಂ ನತ್ವಾ ಕೃತಕೃತ್ಯೋಽಜನಿ ಕ್ಷಣಾತ್ ।
ಅಥ ಜಾತು ನಿಜೇ ಗೇಹೇ ಸ್ವಭಾರ್ಯಾಸವಿಧೇ ಪರಾಮ್ ॥ ೮೧ ॥

ಸಂಸ್ವರಂ ವಾದಿನೀಂ ಕಾಂಚಿನ್ನಿಶಮ್ಯ ಸ ಯದೃಚ್ಛಯಾ ।
ಸಪದ್ಯುಪೇತ್ಯ ನಾದ್ರಾಕ್ಷೀತ್ ಕಾಮಪ್ಯನ್ಯಾಂ ಪ್ರಿಯಾ ವಿನಾ ॥ ೮೨ ॥

ಬುಬೋಧ ತಾಂ ಪ್ರಿಯಾವಾಚಾ ಧರ್ಮಸಂವರ್ಧನೀಂ ಶಿವಾಮ್ ।
ಅಥ ತಾಂ ದಯಿತಾಸಖ್ಯಾತ್ ಸ್ವಯಂ ಗೇಹಮುಪಾಗತಾಮ್ ॥ ೮೩ ॥

ತನ್ನನ್ನು ಮಂದಭಾಗ್ಯನೆಂದು ಭಾವಿಸಿ ತನ್ನ ರಾಜ್ಯವನ್ನು ಬಿಟ್ಟು ಗೋವಿಂದ ಮಾರಾರ್ ಪಂಡರೀಪುರಕ್ಕೆ ಬಂದನು. ಅಲ್ಲೂ ಸಹ ತಮ್ಮ ಕೀರ್ತನೆಗಳಿಂದ ತ್ಯಾಗ

ರಾಜರು ಪ್ರಸಿದ್ಧರು. ಒಂದು ಸಲ ವಾರಾಣಸೀ ನಗರದಿಂದ ಸೇತುದರ್ಶನಕ್ಕಾಗಿ ರಾಮದಾಸನೆಂಬ ಬ್ರಾಹ್ಮಣನು ಚೋಳದೇಶಕ್ಕೆ ಬಂದನು. ಆಗ ತ್ಯಾಗರಾಜರಿಗೆ ಸ್ವಪ್ನದಲ್ಲಿ ಶಿವನು ಕಾಣಿಸಿಕೊಂಡು, ಆ ಬ್ರಾಹ್ಮಣನನ್ನು ಕಾಣುವಂತೆ ಆದೇಶ ನೀಡಿದನು. ಹರನ ಆದೇಶದಂತೆ ಜಿತೇಂದ್ರಿಯನಾದ ರಾಮದಾಸನ ಬಳಿಗೆ ಬಂದು ನಮಸ್ಕರಿಸಿ ಕೃತಕೃತ್ಯನಾಗಿ, ಅನಂತರ ತನ್ನ ಮನೆಗೆ ಹೋಗಿ ತನ್ನ ಧರ್ಮಪತ್ನಿಗೆ ವಿಷಯವನ್ನು ತಿಳಿಸಿದರು.

ಸ್ವರಬದ್ಧವಾಗಿ ಹಾಡುವ ಯಾವಳೋ ವಾದಿನಿಯ ಸ್ವರವನ್ನು ಕೇಳಿ ಅಲ್ಲಿಗೆ ಹೋಗಿ ತನ್ನ ಪ್ರಿಯೆಯ ವಿನಃ ಬೇರೆ ಯಾರನ್ನೂ ಕಾಣದೆ, ಆ ರೀತಿ ಪ್ರಿಯವಾಗಿ ಮಾತನಾಡುವವಳು ಧರ್ಮಸಂವರ್ಧನಿಯಾದ ಶಿವೆಯಲ್ಲದೆ ಬೇರೆ ಯಾರೂ ಅಲ್ಲ ಎಂದು ತಿಳಿದು ತನ್ನ ಮನೆಗೆ ಬಂದರು.

ಇತ್ಯುತ್ತಮಾಸಕ್ತವಿಜ್ಞಾನಿಭೂಪೈಃ
  ಯತ್ಯಾಶ್ರಮಖ್ಯಾತಸತ್ಯಾಧ್ವದೀಕ್ಷೈಃ ॥
ಸ ತ್ಯಾಗರಾಜೋಽಯಮತ್ಯಾದರೇಣ
  ಪ್ರತ್ಯಾಗತೈರ್ನಿತ್ಯಮತ್ಯಾದೃತೋಽಭಾತ್ ॥ ೮೪ ॥

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ಷಷ್ಠ ಸರ್ಗಃ

ಈ ರೀತಿಯಾಗಿ ಉತ್ತಮ ಜ್ಞಾನ ಪಡೆದಿರುವವರು, ರಾಜರು, ಯತ್ಯಾಶ್ರಮದಿಂದ ಖ್ಯಾತರಾಗಿ ಸತ್ಯಯಜ್ಞದ ದೀಕ್ಷೆ ಪಡೆದಿರುವವರಿಂದ ಆ ತ್ಯಾಗರಾಜರು ಅತ್ಯಾದರಗಳಿಂದ ಪೂಜಿಸಲ್ಪಟ್ಟು, ಅತ್ಯಂತ ಶ್ರೇಷ್ಠರಾಗಿ ಪ್ರಕಾಶಿಸಿದರು.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತರಿಂದ ವಿರಚಿತವಾದ
ಶ್ರೀಮತ್ತ್ಯಾಗರಾಜವಿಜಯದ
ಆರನೆಯ ಸರ್ಗವು

## ಪದಾರ್ಥ ಚಂದ್ರಿಕಾ

## ಸರ್ಗ ಆರು

೩. ಸತ್ಪಥೇ—ಸನ್ಮಾರ್ಗದಲ್ಲಿ, ನಕ್ಷತ್ರಪಥದಲ್ಲಿ, ಆಕಾಶದಲ್ಲಿಯೂ ಕೂಡ. ಶೂಲಾಂ—ವೇದನೆಯನ್ನು.

೩೫. ತಮಿಸ್ರಾಯಾಂ—ತಮಸ್ಸಿನಿಂದ ತುಂಬಿದ್ದ ರಾತ್ರಿಯಲ್ಲಿ.

೪೪. ಸ್ವಪ್ನವಂಗ್ವಾತ್ಮಾ—ಕಳ್ಳನು ರಾಮನನ್ನು ಅಪಹರಿಸುವುದನ್ನು ಸ್ವಪ್ನದಲ್ಲಿ ನೋಡಿ. ಖಿನ್ನಮಾನಸಃ—ಖಿನ್ನ ಮನಸ್ಸುಳ್ಳ ತ್ಯಾಗರಾಜರು.

ಮಾನಸಾಖ್ಯೇ—ಮಾನಸ ಸರೋವರದಲ್ಲಿ. ಕಾವೇರಿ ಪ್ರವಾಹವೆಲ್ಲ ಹರಿಯ ಮನಸ್ಸಿನೊಳಗೆ ತುಂಬಿದ್ದರಿಂದ ಕಾವೇರಿ ನದೀಪಾತ್ರವು ಮರಳಿನಿಂದ ತುಂಬಿತ್ತು, ಅಲ್ಪಜಾತವಾಯಿತು.

೬೨. ವಂಚಿ ಮಹೀಪಾಲಃ—ವಂಚಿಭೂಮಿ ಎಂಬ ಕೇರಳ ದೇಶದ ಪಾಲಕ. ಚೇರ ದೇಶವೆಂದೂ ಪ್ರಸಿದ್ಧ.

೭೦. ಸೇವಾ...ಹರಿಭಕ್ತಿಯೇ ಕಸ್ತೂರಿ. ಅದರ ಪರಿಮಳದಂತಿರುವ ಸಂಗೀತವಿದ್ಯೆಯೇ ತಿಲಕ. ಅಂದರೆ ವಿಶೇಷಕವೆಂಬ ಹಣೆಯ ಬೊಟ್ಟು—ಅದರಿಂದ ಶೋಭಿಸುತ್ತಿರುವ.

ಸ್ವರಸಾಹಿತ್ಯ—ಇದೊಂದು ನಿಬಂಧವಿಶೇಷ. ಇದರಲ್ಲಿ ಸ, ರಿ, ಗ, ಮ, ಮೊದಲಾದ ಸ್ವರಗಳನ್ನು ಅರ್ಥಪೂರ್ಣವಾಗಿ ಜೋಡಿಸುತ್ತಾರೆ.

## ಸರ್ಗ ಏಳು

ನಿಷಾದರಸಿಕಂ ಭೋಗೇ ವಿಷಾದ ಹರಣಂ ಸತಾಮ್ ।
ತುಷಾರರುಚಿವಕ್ಲೋಽಸೌ ಬುಭೂಷ ಕೃತಿಭೂಷಣೈಃ ॥ ೧ ॥

ಸಂಗೀತ ಮಂದವಾತೋತ್ಥ ಸಂತತಾನಂದ ಸೌರಭೇ ।
ರಾಮಜೀವನತದ್ಭಾನಸ್ತವನೋಕ್ತಿ ಮಹಾವನೇ ॥ ೨ ॥

ಕವನೇ ಭುವನೇಽನೀಹಸ್ತಸ್ಥಿವಾನ್ ಸ ತಪೋಧನಃ ।
ತ್ಯಾಗರಾಜಸ್ತೃತೀಯೋಽಭಾತ್ ವಾನಪ್ರಸ್ಥಾಶ್ರಮೋಽಪಿ ಸಃ ॥ ೩ ॥

ಶೇಷಶಯನನಾದ ಶ್ರೀಹರಿಯು ಸತ್ಪುರುಷರ ಸಂಕಟಗಳನ್ನು ಹೋಗಲಾಡಿಸುತ್ತಾನೆ. ಈ ನಮ್ಮ ತ್ಯಾಗರಾಜರು ಬೆಳಕಿನಲ್ಲಿ ಹೊಳೆಯುವ ಮಂಜಿನ ಕಣದಂತೆ, ದೈವಕೃಪೆಯಿಂದ ತನ್ನ ಕೃತಿಗಳಿಂದ ಮೆರೆದರು. ಸಂಗೀತದ ಮಂದಮಾರುತದಿಂದ ಸತತವಾಗಿ ಉಂಟಾದ ಆನಂದಸೌರಭದಿಂದ, ಶ್ರೀರಾಮನ ಜೀವನಕ್ರಮದಲ್ಲಿನ ಸನ್ಮಾರ್ಗಗಳಲ್ಲಿ ತಲ್ಲೀನರಾಗಿ, ತನ್ನ ಕೃತಿಗಳೆಂಬ ದೊಡ್ಡ ಕಾಡಿನಲ್ಲಿ ತಪೋಧನನಾಗಿ, ತನ್ನ ಕವಿತಾ ತಪಸ್ಸಿನಲ್ಲಿ ಮುಳುಗಿ ಮೂರನೆಯದಾದ ವಾನಪ್ರಸ್ಥಾಶ್ರಮದಲ್ಲೂ ಕಂಗೊಳಿಸಿದರು.

ಇತಿ ಪಂಚಾಶತಂ ಸಾರ್ಧಾನ್ ವತ್ಸರಾನ್ ಪರಿಯಾಪ್ಯ ಸಃ ।
ಪುಣ್ಯಕ್ಷೇತ್ರಾಟನಂ ಕರ್ತುಂ ಪ್ರತಸ್ಥೇ ಶಿಷ್ಯಸೇವಿತಃ ॥ ೪ ॥

ಆದೌ ಕಲಿಮಲಧ್ವಂಸಿಶೇಷಾಚಲ ವಿಲಾಸಿನಮ್ ।
ಶ್ರೀನಿವಾಸಂ ದೃಶಾ ದ್ರಷ್ಟುಂ ವೇಂಕಟಾದ್ರಿಯಿಯಾಸಯಾ ॥ ೫ ॥

ಆರುಹ್ಯ ಶಿಬಿಕಾ ಮೂಢಾಂ ತವ ಭಕ್ತೈರ್ಗುಣೋಜ್ವಲೈಃ ।
ಗೋವಿಂದರಾಜರಾಜಂತೀಂ ಪುರೀಂ ತಾಂ ಸ ಉಪೇಯಿವಾನ್ ॥ ೬ ॥

ತತಃ ಪದ್ಭ್ಯೈವ ಸಪ್ತಾದ್ರೀನಾರುಹ್ಯಪ್ತಜನೈಃ ಸಹ ।
ಸೋತ್ಕಂಠಂ ವೇಂಕಟೇಶಸ್ಯ ದರ್ಶನಾರ್ಥಂ ಯದಾಗಮತ್ ॥ ೭ ॥

ತದಾ ದೇವಾಲಯದ್ವಾರೇ ನಿವೇದ್ಯ ಸಮಯೋಚಿತಾ ।
ಬದ್ಧಾ ತಿರಸ್ಕರಿಣ್ಯಾಸೀದ್ ದರ್ಶನಪ್ರತಿಬಂಧಿಕಾ ॥ ೮ ॥

ಮಾಯಾಮಿವ ಮಹಾಜ್ಞಾನೀ ಬ್ರಹ್ಮಜ್ಞಾನ ನಿರೋಧಿನೀಮ್ ।
ತಾಮಪ್ಯಾಚ್ಛಾದಿನೀಂ ಧೀರೋ ಭಕ್ತಿವಜ್ರೈರ್ವ್ಯದಾರಯತ್ ॥ ೯ ॥

ಏತದ್ವದನ ಚಂದ್ರೋತ್ಥಾ ಗಾನಸ್ತಾಪನಿವಾರಿಣೀ ।
ದ್ವಿವಿಧಂ ಚ ತಮೋ ಭಿತ್ವಾ ವೇಂಕಟೇಶಮಭಾಸಯನ್ ॥ ೧೦ ॥

ಊರ್ಧ್ವಪುಂಡ್ರಲಸತ್ಫಾಲಂ ಸಿತಕರ್ಪೂರಶೀತೇಕ್ಷಣಮ್ ।
ಸಾಲಿಗ್ರಾಮಶಿಲಾಮಾಲಾ ಮಣಿರಾಜೀವಿರಾಜಿತಮ್ ॥ ೧೧ ॥

ಸುಮನೋಹಾರಿಸೌಂದರ್ಯಂ ಸುಮನೋಹಾರಿವಿಗ್ರಹಮ್ ।
ಆಜಾನುಬಾಹುಮಬ್ಜಾಕ್ಷಮಭಯಪ್ರದಹಸ್ತಕಮ್ ॥ ೧೨ ॥

ನೀಲಮೇಘನಿಭಾಕಾರಂ ಶ್ರೀವಕ್ಷಸ್ಕಂ ಜಗತ್ಪತಿಮ್ ।
ಚಕ್ಷುಃಪುಟೇನ ಭೂಯೋಽಸೌ ನಿಪೀಯ ನಿರುಪದ್ರವಮ್ ॥ ೧೩ ॥

ಸ್ವಾದುಭಿಃ ಕೀರ್ತನೈಃ ಕೈಶ್ಚಿತ್ ತುಷ್ಟಾವೇಷ್ಟಪ್ರದಂ ಹರಿಮ್ ।
ಬಹುಮೇನೇ ತತೋಽಭಿಜ್ಞೈಸ್ತತ್ಪ್ರಭಾವ ವಶಂಗತೈಃ ॥ ೧೪ ॥

ಹೀಗಿರಲು ಅವರಿಗೆ ಐವತ್ತು ವರ್ಷಗಳು ತುಂಬಿದುವು. ಪುಣ್ಯಕ್ಷೇತ್ರಗಳ ದರ್ಶನ ಮಾಡಲು ಇಚ್ಛಿಸಿ ಶಿಷ್ಯಸಮೇತರಾಗಿ ಹೊರಟರು. ಕಲಿಗಾಲದಲ್ಲಿ ಪಾಪಗಳನ್ನು ಹರಿಸುವ, ಶೇಷಾಚಲದಲ್ಲಿ ರಾರಾಜಿಸುತ್ತಿರುವ ಶ್ರೀನಿವಾಸನ ದರ್ಶನ ಮಾಡಲು ಮೊದಲು ವೆಂಕಟಾದ್ರಿಯತ್ತ ಪ್ರಯಾಣ ಬೆಳೆಸಿದರು.

ಮೇನೆಯನ್ನು ಹತ್ತಿ, ಗುಣಶಾಲಿಗಳಾದ ಭಕ್ತರೊಡಗೂಡಿ ಗೋವಿಂದರಾಜನು ರಾರಾಜಿಸುತ್ತಿರುವ ಪಟ್ಟಣಕ್ಕೆ (ತಿರುಪತಿ) ಅವನನ್ನು ಸೇವಿಸಲು ಬಂದರು. ಹಾಗೆಯೇ ಕಾಲುನಡಿಗೆಯಲ್ಲಿ ಏಳು ಬೆಟ್ಟಗಳನ್ನು ಆಪ್ತಜನರೊಡನೆ ಹತ್ತಿ ಬಹಳ ಉತ್ಸಾಹದಿಂದ ಶ್ರೀನಿವಾಸನ ದರ್ಶನ ಮಾಡಲು ಬಂದರು. ಆಗ ನಿವೇದನೆಯ ಸಮಯವಾಗಿತ್ತು. ದೇವಾಲಯದ ಬಾಗಿಲಿನಲ್ಲಿ ತಿರಸ್ಕೃತರಾದಂತಾಗಿ ದೇವರ ದರ್ಶನದಿಂದ ಪ್ರತಿಬಂಧಿತರಾದಂತೆ ಆದರು.

ತನ್ನನ್ನು ಮಾಯೆಯಿಂದ ಮುಚ್ಚಲ್ಪಟ್ಟಿರುವಂತೆ ಕಂಡರು. ಬ್ರಹ್ಮಜ್ಞಾನಿಯೂ, ಧೈರ್ಯಶಾಲಿಯೂ ಆದ ಇವರು ಭಕ್ತಿಯೆಂಬ ವಜ್ರದಿಂದ ಅದನ್ನು ಹೊಡೆದೆಬ್ಬಿಸಿದರು. ಇವರ ಮುಖಾರವಿಂದದಿಂದ ಹೊರಬಂದ ಗಾನವೆಂಬ ತಾಪನಿವಾರಣೆಯು ಎರಡು ಬಗೆಯ ತಮಸ್ಸನ್ನು ಹರಿಸಿ ವೆಂಕಟೇಶನನ್ನು ಕಾಣುವಂತೆ ಮಾಡಿತು.

ಊರ್ಧ್ವಪುಂಡ್ರದಿಂದ ಹೊಳೆಯುತ್ತಿರುವ ಹಣೆ, ಶೀತಲವಾದ ನೋಟ, ಸಾಲಿಗ್ರಾಮದ ಶಿಲೆಯ ಮಾಲೆ ಹಾಗೂ ಮಣಿವಿಶೇಷಗಳ ಹಾರಗಳಿಂದ ರಾರಾಜಿಸುತ್ತಿರುವ, ಹೃದಯವನ್ನು ಆಕರ್ಷಿಸುವ ರಮಣೀಯವಾದ ರೂಪ, ಪುಷ್ಪಹಾರಗಳಿಂದ ಅಲಂಕೃತನಾದ, ಆಜಾನುಬಾಹುವೂ, ವಿಶಾಲನೇತ್ರನೂ, ಅಭಯಹಸ್ತವುಳ್ಳವನೂ, ನೀಲಮೇಘದಂತೆ ಕಪ್ಪಾದ ಶರೀರವುಳ್ಳ, ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿ ಹೊಂದಿರುವ, ಜಗತ್ಪತಿಯಾದ, ನೇತ್ರಕಟಾಕ್ಷ ಮಾತ್ರದಿಂದಲೇ ತೊಂದರೆಗಳನ್ನು ನಿವಾರಿಸುವ ಶ್ರೀವೆಂಕಟೇಶನನ್ನು ಬಹಳ

ಮಧುರವಾದ, ಕೆಲವು ಇಷ್ಟಪ್ರದವಾದ ಕೀರ್ತನೆಗಳಿಂದ ಸಂತುಷ್ಟಗೊಳಿಸಿದರು. ತಿಳಿಯ ದಿದ್ದ ಅಲ್ಲಿದ್ದ ಅಜ್ಞಾನಿಗಳಿಗೆ ಇವರ ಪ್ರಭಾವದ ಅರಿವಾಯಿತು.

ಅಥ ಲಕ್ಷ್ಮೀಂ ಮಹಾದೇವೀಂ ದಿವ್ಯೇ ಪದ್ಮಸರೋವರೇ ।
ಅಭಿವಂದ್ಯ ಸದಾರೋಽಯಂ ಗೋಗ್ರಾಮಂ ಚ ತತೋ ವ್ರಜನ್ ॥ ೧೫ ॥

ಮಧ್ಯೇ ಮಾರ್ಗಮಸೌ ಸೌಮ್ಯಃ ಶುಶ್ರಾವಾಕ್ರಂದನಂ ಸ್ತ್ರಿಯಾಃ ।
ಯಸ್ಯಾಃ ಸಾಧ್ವ್ಯಾಃ ಪ್ರಿಯೋ ಭರ್ತಾ ಕೂಪಪಾತಾನ್ಮೃತೋಽಭವತ್
॥ ೧೬ ॥

ಆಕ್ರಂದಂತೀಂ ನಿಜೈರ್ಬಾಲೈಃ ಪತಿಮಾತ್ರಗತಿಂ ತದಾ ।
ಬ್ರಾಹ್ಮಣೀಂ ತ್ರಾತುಕಾಮೋಽಭೂದ್ ರಾಮಚಂದ್ರ ದಯಾಬಲಾತ್
॥ ೧೭ ॥

ಅತೋಽಸೌ ಕೀರ್ತನಂ ಕಿಂಚಿತ್ ಕರುಣೈಕರಸೋಜ್ಜ್ವಲಮ್ ।
ಪ್ರಾರೇಭೇ ಯಾವತಾ ವಿಪ್ರೋ ಮೃತಃ ಸುಪ್ತೋತ್ಥಿತೋಽಭವತ್ ॥ ೧೮ ॥

ಏತೇನ ದ್ವಿಗುಣೀಭೂತ ಪ್ರಭಾವೋಽಯಮಥಾಗಮತ್ ।
ಗೋಗ್ರಾಮಂ ಸುಂದರೇಶಾಖ್ಯಃ ಶೂದ್ರಃ ಕಶ್ಚಿನ್ಮಹಾಸ್ತಿಕಃ ॥ ೧೯ ॥

ಇದಾದ ನಂತರ ಪದ್ಮಸರೋವರದಲ್ಲಿರುವ ದಿವ್ಯವಾದ ಮಹಾದೇವಿ ಲಕ್ಷ್ಮಿಯನ್ನು ಭಕ್ತಿಪೂರ್ವಕವಾಗಿ ನಮಿಸಿ, ತರುವಾಯ ಗೋಗ್ರಾಮಕ್ಕೆ ಹೊರಟರು. ಮಾರ್ಗಮಧ್ಯ ದಲ್ಲಿ ಬಾವಿಯ ಕುಸಿತದಿಂದ ತಮ್ಮ ಪತಿಯರನ್ನು ಕಳೆದುಕೊಂಡ ಸಾಧ್ವೀಮಣಿಯರ ಆಕ್ರಂದನವು ಕೇಳಿಸಿತು. ತಮ್ಮ ಮಕ್ಕಳೊಂದಿಗೆ ಪತಿಯರನ್ನು ಅವಲಂಬಿಸಿದ್ದ ಆ ಹೆಂಗಸರ ಪ್ರಿಯ ಗಂಡಂದಿರನ್ನು ಶ್ರೀರಾಮಚಂದ್ರನ ದಯೆಯಿಂದ ರಕ್ಷಿಸುವ ಆಸೆಯುಳ್ಳ ವರಾದರು.

ಆಗ ಇವರು ಕರುಣಾಪೂರಿತವಾದ ಕೆಲವು ಕೀರ್ತನೆಗಳನ್ನು ಸುಶ್ರಾವ್ಯವಾಗಿ ಭಕ್ತಿ ಯಿಂದ ಹಾಡಲು ಸತ್ತಿದ್ದ ಆ ಬ್ರಾಹ್ಮಣರು ಮಲಗಿ ಎದ್ದವರಂತೆ ಎದ್ದರು. ಇದರಿಂದ ಇವರ ಪ್ರಭಾವವು ದ್ವಿಗುಣಿತವಾಯಿತು.

ತ್ಯಾಗರಾಜಪ್ರಭಾವಜ್ಞಃ ಪ್ರತ್ಯುದ್ಗಮ್ಯ ತಮುತ್ತಮಮ್ ।
ಸಪ್ತರಾತ್ರಂ ನಿಜೇ ಗೇಹೇಹ್ಯವಸ್ಥಾಪ್ಯ ಸಶಿಷ್ಯಕಮ್ ॥ ೨೦ ॥

ಅನ್ನವಸ್ತ್ರಾದಿ ಶಿಷ್ಯೇಭ್ಯೋ ವಿತರನ್ನತರದ್ಭವಮ್ ।
ತ್ಯಾಗರಾಜಂ ತು ಭಕ್ತ್ಯೇಕತುಷ್ಟಂ ತುಷ್ಟಾವ ಕೇವಲಮ್ ॥ ೨೧ ॥

ತತ್ರತ್ಯಸ್ಯ ಹರಸ್ಯಾಥೋಽಸ್ತಾವಕಂ ಕೀರ್ತನಂ ಶುಭಮ್ ।
ತನ್ಮುಖಾತ್ ಪ್ರಾಪ್ಯ ಸಂತುಷ್ಟೋ ಮೇನೇ ಸ್ವಂ ಕೃತಕೃತ್ಯಕಮ್ ॥ ೨೨ ॥

ಅಥಾಸ್ಮಿನ್ ನಿಃಸ್ಪೃಹೇ ವಿಪ್ರೇ ತ್ಯಾಗರಾಜೇ ಧನದ್ವಿಷಿ ।
ಅಜ್ಞಾಪಯನ್ ಧನಗ್ರಂಥಿಂ ಸಮರ್ಪಯಿತುಮುತ್ಸುಕಃ ॥ ೨೩ ॥

ಶಿಬಿಕಾಯಾಂ ರಹಸ್ತಸ್ಯಾಸನಸ್ಯಾಧೋ ಮಹದ್ ಧನಮ್ ।
ನಿಧಾಯ ಪ್ರೇಷಯತ್ ಭಕ್ತ್ಯಾ ಗುರುಮೇತಂ ಮುಹುರ್ನಮನ್ ॥ ೨೪ ॥

ಶಿಷ್ಯಾಸ್ತ ಜ್ಞಾನಿನೋಽಪ್ಯೇತನ್ನಾವದನ್ ಸ್ವಗುರುಂ ಭಯಾತ್ ।
ಅಥ ಸ ತ್ಯಾಗರಾಜಸ್ತು ಪ್ರತಸ್ಥೇ ನಿಜಪತ್ತನಮ್ ॥ ೨೫ ॥

ಆ ಗ್ರಾಮದಲ್ಲಿ ಸುಂದರೇಶನೆಂಬ ಅನ್ಯವರ್ಣದವನಾದ ಮಹಾ ಆಸ್ತಿಕನೊಬ್ಬ ನಿದ್ದನು. ತ್ಯಾಗರಾಜರ ಪ್ರಭಾವವನ್ನು ಈತನು ಅರಿತಿದ್ದನು. ಅತ್ಯಂತ ಶ್ರೇಷ್ಠರಾದ ಅವರನ್ನು ಕಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಏಳು ದಿನ ಪೂರ್ತಾ ಶಿಷ್ಯ ಸಮೇತರಾದ ಅವರನ್ನು ಉಪಚರಿಸಿದನು. ಅನ್ನವಸ್ತ್ರಾದಿಗಳಿಂದ ಆ ಎಲ್ಲ ಶಿಷ್ಯರನ್ನೂ ಸಂತೃಪ್ತಿಗೊಳಿಸಿದನು. ತ್ಯಾಗರಾಜರಾದರೋ ಕೇವಲ ಅವನ ಭಕ್ತಿಯಿಂದಲೇ ಸಂತೋಷ ಗೊಂಡರು. ಹರನ ಸ್ತೋತ್ರ ಮಾಡಿ ಶುಭವಾದ ಕೀರ್ತನೆಗಳನ್ನು ಹಾಡಿದರು. ಅವರ ಮುಖಾರವಿಂದದಿಂದಲೇ ಕೀರ್ತನೆಗಳನ್ನು ಕೇಳಿದ ಆ ಗ್ರಾಮಾಧೀಶನು ಕೃತಕೃತ್ಯ ನಾದನು.

ನಿಸ್ಪೃಹರಾದ ಆ ತ್ಯಾಗರಾಜರಲ್ಲಿ ಹಣದ ವಿಷಯದಲ್ಲಿ ಕಿಂಚಿತ್ತಾದರೂ ವ್ಯಾಮೋಹ ವಿಲ್ಲದಿರುವುದನ್ನು ಕಂಡು ಹಣದ ಗಂಟನ್ನು ಹೇಗಾದರೂ ಮಾಡಿ ಸಮರ್ಪಿಸಲು ಉದ್ಯುಕ್ತನಾದನು. ಮೇನೆಯ ಆಸನದ ಕೆಳಭಾಗದಲ್ಲಿ ರಹಸ್ಯವಾಗಿ ಹೆಚ್ಚು ಪ್ರಮಾಣದ ಹಣವನ್ನಿಟ್ಟು ಬಹಳ ಭಕ್ತಿಯಿಂದ ಆ ಗುರುವನ್ನು ಪುನಃ ನಮಸ್ಕರಿಸಿ ಕಳುಹಿಸಿಕೊಟ್ಟನು. ಇದನ್ನು ತಿಳಿದಿದ್ದರೂ ಬಹಳ ಹೆದರಿಕೆಯಿಂದ ಶಿಷ್ಯರು ತ್ಯಾಗರಾಜರಿಗೆ ಈ ವಿಷಯ ವನ್ನು ತಿಳಿಸಲಿಲ್ಲ.

ಅನಂತರ ತ್ಯಾಗರಾಜರು ತನ್ನ ಪಟ್ಟಣದ ಕಡೆಗೆ ಹೊರಟರು,

ಮಧ್ಯೇಮಾರ್ಗಂ ನಿಶೀಥೇಽಥೋ ಕೇಚಿಚ್ಚೋರಾಃ ಕೃತಾರವಾಃ ।
ನಿವಾರ್ಯೈತಾನ್ ಧನಂ ಸರ್ವಂ ಹರ್ತುಕಾಮಾಸ್ತಮಾರ್ದಯನ್ ॥ ೨೬ ॥

ಶಿಷ್ಯೇಷು ಭೀತಭೀತೇಷು ತ್ಯಾಗರಾಜಃ ಸ್ಥಿರಾಂತರಃ ।
ಅಕೃತೋಭಯ ಏವಾಸೀದ್ ವಿರಕ್ತಸ್ಯ ಕುತೋಭಯಮ್ ? ॥ ೨೭ ॥

ಸ್ವಭಕ್ತಪರತಂತ್ರೋ ಹಿ ರಾಮಚಂದ್ರಃ ಸಹಾನುಜಃ ।
ತಂ ರರಕ್ಷ ಜಗದ್ರಕ್ಷಾ ದೀಕ್ಷಿತೋ ರಾಕ್ಷಸಂತಪಃ ॥ ೨೮ ॥

ಕೋದಂಡಮಂಡಿತೋದ್ಬಾಹುಂ ರಾಮಂ ಸೌಮಿತ್ರಿ ಸಂಯುತಮ್ ।
ಭಯಾನಕಂ ದ್ವಿಷಾಂ ದೃಷ್ಟ್ವಾ ತ್ಯಾಗರಾಜಾಭಿರಕ್ಷಕಮ್ ॥ ೨೯ ॥

ಸದ್ಗುರೋರಸ್ಯ ಪಾದಾಬ್ಜೇ ಪ್ರಣಮ್ಯೈತೇಽಥ ತಸ್ಕರಾಃ ।
ಪಪ್ರಚ್ಛುಸ್ತೌ ಮಹಾವೀರೌ ಧನುಷ್ಮಂತೌ ತು ಕಾವಿತಿ ॥ ೩೦ ॥

ಅಜ್ಞಾತತತ್ಕಥೋ ವಿಜ್ಞಸ್ತ್ಯಾಗರಾಜಃ ಸ್ವರಕ್ಷಕೌ ।
ರಾಮಂ ರಾಮಾನುಜೌ ಜ್ಞಾತ್ವಾ ಕೀರ್ತನೈಸ್ತತ್ಕೃಪಾಂ ಸ್ತುವನ್ ॥ ೩೧ ॥

ಚೋಽರಾಂಸ್ತಾನ್ ಬೋಧಯಾಮಾಸ ಕೃತಾರ್ಥಾನ್ ರಾಮದರ್ಶನಾತ್ ।
ಯೇನ ತಾಸ್ಕರ್ಯಮುಜ್ಝಿತ್ವಾ ತೇ ತಚ್ಛಿಷ್ಯ ತಯಾವ್ರಜನ್ ॥ ೩೨ ॥

ಮಧ್ಯಮಾರ್ಗದಲ್ಲಿ ಹೋಗುತ್ತಿರುವಾಗಲೇ ರಾತ್ರಿಯಾಗಲು ಕೆಲವು ಕಳ್ಳರು ಕಾಣಿಸಿಕೊಂಡರು. ಇವರೆಲ್ಲರನ್ನೂ ಕೊಂದು ಎಲ್ಲಾ ಹಣವನ್ನು ದೋಚಿಕೊಂಡು ಹೋಗಲು ಸನ್ನದ್ಧರಾದರು. ತ್ಯಾಗರಾಜರ ಶಿಷ್ಯರು ಬಹಳವಾಗಿ ಹೆದರಿ ನಿಂತಲ್ಲಿಯೇ ನಿಂತುಬಿಟ್ಟರು. ತ್ಯಾಗರಾಜರಿಗಾದರೋ ಲವಲೇಶವೂ ಭಯವಿರಲಿಲ್ಲ. ವಿರಕ್ತನಿಗೆ ಭಯವೆಲ್ಲಿಂದ ಬರಬೇಕು ?

ರಾಕ್ಷಸರನ್ನು ಸಂಹರಿಸಿದ, ಜಗದ್ರಕ್ಷಕನಾದ ಶ್ರೀರಾಮಚಂದ್ರನು ತನ್ನ ಭಕ್ತನು ಪರರ ತಂತ್ರಕ್ಕೆ ಸಿಲುಕಿಕೊಂಡಿರುವುದನ್ನು ಕಂಡು ಅವರನ್ನು ರಕ್ಷಿಸಿದನು. ಕೋದಂಡಪಾಣಿಯೂ, ಆಜಾನುಬಾಹುವೂ, ಲಕ್ಷ್ಮಣಸಹಿತನೂ, ತ್ಯಾಗರಾಜರ ರಕ್ಷಕನೂ ಆಗಿರುವ, ಶತ್ರುಗಳಿಗೆ ಭಯಂಕರರಾಗಿರುವ ರಾಮಲಕ್ಷ್ಮಣರನ್ನು ನೋಡಿ ಕಳ್ಳರು ಹೆದರಿ, ಸದ್ಗುರು ಶ್ರೀ ತ್ಯಾಗರಾಜರ ಪಾದಗಳಿಗೆ ಎರಗಿ ಅವರನ್ನು ಈ ರೀತಿ ಪ್ರಶ್ನಿಸಿದರು : "ಯಾರಿವರು ಮಹಾವೀರರಾದ ಧನುರ್ಧಾರಿಗಳು ?"

ಅಜ್ಞಾನಿಗಳಾದ ಅವರು ತ್ಯಾಗರಾಜರಕ್ಷಕರಾದ ರಾಮಲಕ್ಷ್ಮಣರನ್ನು ಹೇಗೆ ತಾನೇ ಗುರುತಿಸಬಲ್ಲರು ? ತತ್‌ಕ್ಷಣವೇ ರಾಮಲಕ್ಷ್ಮಣರನ್ನು ಗುರುತಿಸಿದ ತ್ಯಾಗರಾಜರು ತನ್ನ ಕೀರ್ತನೆಗಳಿಂದ ಅವರನ್ನು ಕುರಿತು ಸ್ತೋತ್ರಮಾಡಿದರು.

ಶ್ರೀರಂಗಕ್ಷೇತ್ರಮಾಗತ್ಯ ಶೇಷಭೋಗಾಧಿಶಾಯಿನಮ್ ।
ವಿಭೀಷಣ ಸಮಭ್ಯರ್ಚ್ಯಂ ರಂಗನಾಥಂ ದದರ್ಶ ಸಃ ॥ ೩೩ ॥

ಸ್ತುತ್ವೈನಂ ಕೀರ್ತನೈರಮ್ಯೈರ್ಜಂಬುಲಿಂಗೇಶ್ವರಂ ತಥಾ ।
ಅಖಿಲಾಂಡೇಶ್ವರೀಂ ದೇವೀಮಸ್ತಾವೀತ್ ಸುರಸಂಸ್ತುತಾಮ್ ॥ ೩೪ ॥

ಅಥಮಧ್ಯಾರ್ಜುನಕ್ಷೇತ್ರೇ ಮಹಾಲಿಂಗೇಶ್ವರಂ ಶಿವಮ್ ।
ಅಭಿವಂದ್ಯ ತತೋಽಯಾಸೀದ್ ಗೋವಿಂದಪುರಮುತ್ತಮಮ್ ॥ ೩೫ ॥

ಬ್ರಹ್ಮಭೂಯಂ ಗತಾನ್ ತತ್ರ ಬೋಧೇಂದ್ರ ಗುರುಪುಂಗವಾನ್ ।
ಆರಾಧ್ಯ ವೇಂಕಟೇಶಾರ್ಯಾನುಪಚರ್ಯ ಚ ಕೀರ್ತನೈಃ ॥ ೩೬ ॥

ಸ್ತುತ್ವಾಽಥ ಭಾರ್ಯಯಾ ಸಾಕಂ ನಾಗಪತ್ತನಮೀಯಿವಾನ್ ।
ತತ್ರ 'ನೀಲಾಯತಾಕ್ಷೀಶಂ' ಕಾಯಾರೋಹಶಿವಂ' ನಮನ್ ॥ ೩೭ ॥

ತುಷ್ಟಾವ ಕೀರ್ತನೈಃ ಕೈಶ್ಚಿನ್ಮಧುರೈರ್ಭಕ್ತಿಪೂರಿತೈಃ ।
ಅಥ ಪಂಚನದಂ ಪ್ರಾಪ ಪ್ರಣತಾರ್ತಿಹರಪ್ರಿಯಮ್ ॥ ೩೮ ॥

ಅನಂತರ ಶ್ರೀರಂಗಕ್ಷೇತ್ರಕ್ಕೆ ಬಂದರು. ವಿಭೀಷಣನಿಂದ ಚೆನ್ನಾಗಿ ಅರ್ಚಿಸಲ್ಪಟ್ಟ, ಶೇಷಭೋಗಾದಿಶಯನನಾದ ಶ್ರೀರಂಗನಾಥನ ದರ್ಶನ ಮಾಡಿ, ಕೀರ್ತನೆಗಳಿಂದ ಸ್ತುತಿಸಿ, ಜಂಬುಲಿಂಗೇಶ್ವರನ ದರ್ಶನ ಮಾಡಿ, ಅವನನ್ನು ಸ್ತುತಿಸಿ, ದೇವತೆಗಳಿಂದ ಸ್ತುತಿಸಲ್ಪಡುವ ಅಖಿಲಾಂಡೇಶ್ವರಿಯನ್ನು ಸ್ತುತಿಸಿದರು.

ತರುವಾಯ ಮಧ್ಯಾರ್ಜುನ ಕ್ಷೇತ್ರದಲ್ಲಿ ಮಹಾಲಿಂಗೇಶ್ವರನಾದ ಶಿವನ ದರ್ಶನ ಮಾಡಿ, ಅಲ್ಲಿಂದ ಉತ್ತಮವಾದ ಗೋವಿಂದಪುರಕ್ಕೆ ಬಂದರು. ಬ್ರಹ್ಮೈಕ್ಯರಾಗಿರುವ ಶ್ರೇಷ್ಠರಾದ ಬೋಧೇಂದ್ರ ಗುರುಪುಂಗವರನ್ನು ಆರಾಧಿಸಿ, ಕೀರ್ತನೆಗಳಿಂದ ವೆಂಕಟೇಶಾರ್ಯರನ್ನು ಉಪಚರಿಸಿದರು.

ತನ್ನ ಪತ್ನಿಯೊಡನೆ ಇವರನ್ನೆಲ್ಲಾ ಸ್ತೋತ್ರರೂಪದಲ್ಲಿ ಸ್ತುತಿಸಿ, ನಾಗಪಟ್ಟಣಕ್ಕೆ ಬಂದು, ಅಲ್ಲಿ ದೇವಿ ನೀಲಾಯತಾಕ್ಷಿಯನ್ನೂ, ಕಾಯಾರೋಹಣ ಶಿವನನ್ನೂ ದರ್ಶನ ಮಾಡಿ, ಅವರನ್ನು ಭಕ್ತಿಪೂರ್ವಕವಾದ ಕೆಲವು ಕೀರ್ತನೆಗಳಿಂದ ಸಂತೋಷಗೊಳಿಸಿ, ಪಂಚನದ ಕ್ಷೇತ್ರಕ್ಕೆ ಬಂದು ಪ್ರಣತಾರ್ತಿಹರನನ್ನು ಸಂದರ್ಶಿಸಿದರು.

ನಿಜೈರ್ವೇಂಕಟರಾಮಾಖ್ಯೈರ್ಗುರುಭಿಃ ಸಹ ಸ ದ್ವಿಜಃ ।
ಕದಾಚಿನ್ನವ ಸಾಲಾಖ್ಯಂ ಪುರಂ ಪ್ರಾಪ ಮಹಾಕವಿಃ ॥ ೩೯ ॥

ಸಂಗೀತಲಕ್ಷ್ಮತತ್ತ್ವೇಷು ಪರೀಕ್ಷಾ ಯಾ ಹ್ಯವರ್ತತ ।
ತತ್ರಾನೇಕೇಷು ವಿದ್ವಸ್ತು ನಿರ್ಜಿತೇಷು ಮಹೀಕ್ಷಿತಾ ॥ ೪೦ ॥

ಗುರ್ವಾದೇಶಾದಯಂ ಧೀರಃ ಸದ ಆರುಹ್ಯ ದುರ್ಜಯಮ್ ।
ಜ್ಯೋತಿಃಸ್ವರೂಪಿಣೀಂ ನಾಮ್ನಾ ರಾಗಂ ಕಶ್ಚಿತ್ ಅತಿಸ್ಫುಟಮ್ ॥ ೪೧ ॥

ಆಲಲಾಪ ಕಲಾವಾರ್ಧಿಸ್ತಥಾ ಕೋಲಾಹಲೇನ ಸಃ ।
ಯಥಾ ತತ್ರಸ್ಥದೀಪಸ್ಥಾ ನಿರಗ್ನಿಮಪಿ ವರ್ತಿಕಾ ॥ ೪೨ ॥

ತದ್ರಾಗಗಾನಮಾಹಾತ್ಮ್ಯಜ್ವಾಲಾಮಾಲಾಭಿರಜ್ವಲತ್ ।
ತದಾಲೋಕ್ಯ ಮಹಾರಾಜಃ ಸರ್ವೇ ಚ ವಿಜಿತಾ ಬುಧಾಃ ॥ ೪೩ ॥

ತಮೇನಂ ಮರ್ತ್ಯರೂಪೇಣ ಭುವಿ ಜಾತಂ ಕಲಾರ್ಣವಮ್ ।
ಗಂಧರ್ವನಾಯಕಂ ವಿಜ್ಞಂ ನಿಶ್ಚಿಕ್ಯುರಿತಿನಾರದಮ್ ॥ ೪೪ ॥

ತನ್ನ ಗುರು ವೆಂಕಟರಾಮ ಎಂಬುವರೊಂದಿಗೆ ಪುದುಕೋಟೆ ಎಂಬ ಪಟ್ಟಣಕ್ಕೆ ಈ ಮಹಾಕವಿಯು ಬಂದರು. ಸಂಗೀತಲಕ್ಷ್ಯತತ್ತ್ವಗಳಲ್ಲಿ, ಪರೀಕ್ಷೆಗಳೆಲ್ಲದರಲ್ಲಿ ಅಲ್ಲಿನ ವಿದ್ವಜ್ಜನರನ್ನು ಜಯಿಸಿ, ಗುರುವಿನ ಆದೇಶದಂತೆ ಈ ಧೀರನು ದುರ್ಜಯವಾದ

ಉನ್ನತ ಸ್ಥಾನವನ್ನೇರಿ, ಜ್ಯೋತಿಸ್ವರೂಪಿಣಿ ಎಂಬ ರಾಗವನ್ನು ಅತಿ ಸ್ಫುಟವಾಗಿ ಆಲಾಪನೆ ಮಾಡಿ ಕಲೆಯು ಮೇರುಶಿಖರವನ್ನೇರಿದರು. ಅಲ್ಲಿದ್ದ ದೀಪಗಳ ಬತ್ತಿಗಳು ಆ ರಾಗದ ಗಾನದ ಮಹತ್ವದಿಂದ ಜ್ವಾಲೆಯ ಮಾಲೆಯಂತೆ ಹತ್ತಿಕೊಂಡು ಪ್ರಜ್ವಲಿಸಿದುವು. ಅದನ್ನು ನೋಡಿದ ಮಹಾರಾಜ ಮತ್ತು ಎಲ್ಲಾ ಪಂಡಿತರೂ ವಿಜಯಿಗಳಾದಂತಾದರು. ಕಲಾಸಮುದ್ರದ ಗಂಧರ್ವದೇವತೆಯು ಮನುಷ್ಯಸ್ವರೂಪದಲ್ಲಿ ಈ ಭೂಮಿಯಲ್ಲಿ ಜನಿಸಿ, ಇವರು ಅತಿನಾರದನಾಗಿರುವನೆಂದು ಎಲ್ಲರೂ ನಿಶ್ಚಯಿಸಿದರು.

ಅಥಾಸ್ಯ ದಯಿತಾ ಸಾಧ್ವೀ ಪೂತವಾಕ್ಕಾಯಮಾನಸಾ ।
ಸಹಸಾ ಶಿವಪಾದಾಬ್ಜಂ ಭೇಜೇ ಸುಕೃತಿ ಸುಗ್ರಹಮ್ ॥ ೪೫ ॥

ತದ್ವಿಯೋಗೇನ ಸಂತಪ್ತಃ ಕೃಷ್ಣಮೇವ ಹೃದಾ ದಧತ್ ।
'ನೌಕಾಚರಿತ'ಮುತ್ಕೃಷ್ಟಂ 'ಪ್ರಹ್ಲಾದವಿಜಯಂ' ತಥಾ ॥ ೪೬ ॥

ವಿರಚಯ್ಯಾತುಲೌ ಗ್ರಂಥೌ ಸಂಗೀತಮಧುಪೂರಿತೌ ।
ಚರಿತಾರ್ಥಾಂ ನಿಜಾಂ ಚಕ್ರೇ ರಸನಾಂ ರಸಿಕಾಗ್ರಣೀಃ ॥ ೪೭ ॥

ಅಥ ಭೂವಾಸತಃ ಶ್ರಾಂತಮೇಕಾಂತಸುಖಕಾಮುಕಮ್ ।
ತಂ ಸ್ವಪಾದಾಬ್ಜಮಾನೇತುಂ ರಾಮಃ ಕಾಮಮಧೀಧರತ್ ॥ ೪೮ ॥

ತತೋಽಸ್ಯ ಸ್ವಪ್ನ ಆಗತ್ಯ ತ್ಯಾಗರಾಜಂ ಮುದಾಽಬ್ರವೀತ್ ॥
'ಅಲಂ ತೇ ಭೂಮಿವಾಸೇನ ತ್ಯಾಗರಾಜ ಮಹಾತಪಃ ॥ ೪೯ ॥

ಇತಸ್ತು ದಶಮೇ ಮಾಸಿ ಯಾಸಿ ವಾಸಂ ಮದಂತಿಕೇ ॥
ಅಥಾಪಿ ಜನ್ಮತೇ ತ್ವನ್ಯದ್ ದುರ್ವಾರಂ ಭುವಿ ಶಿಷ್ಯತೇ ॥ ೫೦ ॥

ಮತ್ಪದಂ ಪಾಪಿದುಷ್ಪ್ರಾಪಂ ತದ್ವಿನಾಶ್ಯ ಸಮೇಷ್ಯತಿ' ।
ಇತ್ಯುಕ್ತ್ವಾ ಭಗವಾನ್ ರಾಮಃ ಕ್ಷಣೇನಾಂತರ್ದಧೇ ಪ್ರಭುಃ ॥ ೫೧ ॥

ತ್ಯಾಗರಾಜಸ್ತುಮತ್ಯಾಪ್ತಂ ಸ್ತುವನ್ ಭಕ್ತ್ಯಾ ಸ್ವಕೀರ್ತನೈಃ ।
ಯುಗ ಕಲ್ಪಾನಿಮಾನ್ ಮಾಸಾನ್ ಯಾಪಯಾಮಾಸ ತಾಪಸಃ ॥ ೫೨ ॥

ಅಚಿರಾದ್ ರಾಮಪಾದಾಬ್ಜ ಸನ್ನಿಧಾನಂ ಯಿಯಾಸುನಾ ।
ತೇನಾಶು ಕೃತಯೋ ರಮ್ಯಾ ಭೂಯಸ್ಯೋಽಥ ವಿತೇನಿರೇ ॥ ೫೩ ॥

ವಿಷಯೇಷ್ವಸ್ಯ ವೈರಾಗ್ಯಂ ರಾಮೇ ಭಕ್ತಿರ್ಗರೀಯಸೀ ।
ಭಕ್ತೇಷು ಚಾದರೋ ಭೂಯಾನ್ ವವೃಧೇ ಜರಸಾ ಸಹ ॥ ೫೪ ॥

ಈ ಕಾಲದಲ್ಲಿ ತ್ಯಾಗರಾಜರನ್ನು ಕಾಯಾ ವಾಚಾ ಮನಸಾ ಸೇವಿಸುತ್ತಿದ್ದ ಸಾಧ್ವೀಮಣಿಯಾದ ಅವರ ಪತ್ನಿಯು ಶಿವನ ಪಾದವನ್ನು ಸೇರಿದಳು. ಅವಳ ವಿಯೋಗದಿಂದ

ಬಹಳ ದುಃಖಿಗೊಂಡರು. ಸದಾ ಹೃದಯದಲ್ಲಿ ಕೃಷ್ಣನನ್ನೇ ಧರಿಸಿ ಉತ್ಕೃಷ್ಟವಾದ 'ನೌಕಾಚರಿತ' ಮತ್ತು 'ಪ್ರಹ್ಲಾದ ಭಕ್ತಿವಿಜಯ'ವನ್ನು ರಚಿಸಿ, ಆ ಗ್ರಂಥಗಳಲ್ಲಿ ಸಂಗೀತಾಮೃತವನ್ನು ಸೇರಿಸಿದರು. ಇವುಗಳಿಂದ ರಸಿಕಾಗ್ರಣಿಗಳ ನಾಲಿಗೆಯನ್ನು ಸತುವಾಗಿಯೂ. ಚರಿತಾರ್ಥವುಳ್ಳದ್ದನ್ನಾಗಿಯೂ ಮಾಡಿದರು.

ಅನಂತರ ಏಕಾಂತವಾಸವನ್ನು ಇಚ್ಛಿಸಿದ ಶ್ರೀ ತ್ಯಾಗರಾಜರನ್ನು ಶ್ರೀರಾಮನು ತನ್ನ ಪಾದಕಮಲಗಳಲ್ಲಿ ಸೇರಿಸಿಕೊಳ್ಳುವ ಮನಸ್ಸು ಮಾಡಿದನು. ತ್ಯಾಗರಾಜರ ಸ್ವಪ್ನದಲ್ಲಿ ಕಾಣಿಸಿಕೊಂಡು ಈ ರೀತಿ ಬಹಳ ಸಂತೋಷದಿಂದ ಹೇಳಿದನು—"ಎಲೈ, ಮಹಾ ತಪಸ್ವಿಯಾದ ತ್ಯಾಗರಾಜನೇ, ಈ ಲೋಕದ ವಾಸವನ್ನು ಸಾಕುಮಾಡು. ಇಲ್ಲಿಂದ ಹತ್ತನೆಯ ತಿಂಗಳಲ್ಲಿ ಯಾವ ದಿನವಿದೆಯೋ ಅದು, ನೀನು ನನ್ನ ಹತ್ತಿರಕ್ಕೆ ಬರಲು ಯೋಗ್ಯವಾದ ದಿನವಾಗಿದೆ. ಆದರೂ ಸಹ ನಿನಗೆ ಈ ಭೂಮಿಯಲ್ಲಿ ಇನ್ನೂ ಒಂದು ಜನ್ಮವಿದೆ. ಉಳಿದಿರುವ ಆ ಜನ್ಮವನ್ನು ಅನುಭವಿಸಿ ನಂತರ ನೀನು ನನ್ನನ್ನು ಸೇರಿಕೊಳ್ಳುವೆ." ಹೀಗೆ ಹೇಳಿ ಭಗವಂತನಾದ ಶ್ರೀರಾಮಚಂದ್ರನು ಕ್ಷಣಮಾತ್ರದಲ್ಲಿ ಅಂತರ್ಧಾನನಾದನು.

ತ್ಯಾಗರಾಜರು ಬಹಳ ಭಕ್ತಿಯಿಂದ, ತನ್ನ ಕೀರ್ತನೆಗಳಿಂದ ಆ ಪರಮಾತ್ಮನನ್ನು ಸ್ತುತಿಸುತ್ತಾ, ಭಜಿಸುತ್ತಾ, ತಾಪಸವೃತ್ತಿಯಿಂದ ಮಾಸಗಳನ್ನು ಕಳೆದರು. ಬಹಳ ಬೇಗ ಶ್ರೀರಾಮನ ಪಾದಗಳನ್ನು ಸೇರುವ ಆಸಕ್ತಿಯನ್ನು ಹೊಂದಿದ್ದ ಇವರಿಂದ ಬಹುರಮ್ಯವಾದ ಅನೇಕ ಆಶುಕೃತಿಗಳು ಹೊರಬಂದುವು.

ಐಹಿಕ ವಸ್ತುಗಳಲ್ಲಿ ವೈರಾಗ್ಯಭಾವ ತಾಳಿ, ಭಕ್ತಿಯಲ್ಲಿ ಅತ್ಯಂತ ಶ್ರೇಷ್ಠತಮ ಹಂತವನ್ನು ತಲುಪಿ, ಭಕ್ತರಲ್ಲಿ ಅಗ್ರಗಣ್ಯರಾಗಿ ವೃದ್ಧಾಪ್ಯದಿಂದ ಕೂಡಿದವರಾಗಿದ್ದರು.

ದಶಸ್ವೇವ ದಿನೇಷ್ವಸ್ಯ ಶಿಷ್ಟೇಷು ತನುಧಾರಿಣಃ ।
ಜನ್ಮಾಂತರೇ ವಿನಾಶಾಯ ಪರಿವವ್ರಾಜ ಧರ್ಮಧೃಕ್ ॥ ೫೫ ॥

ಚತುರ್ಥೇತ್ವಾಶ್ರಮೇಽಮುಷ್ಮಿನ್ ವಿಧಿವದ್ ಗುರುರಾಜತಃ ।
ಗೃಹೀತೇ ವಿಹಿತಾನ್ ಧರ್ಮಾನ್ ಸದ್ಗುರುಃ ಸ ಸಮಾಚರತ್ ॥ ೫೬ ॥

ಅದಯೋ ದಶಮೋ ಹಂತ ವಾಸರೋ ಜನತಾಪಕಃ ।
ಸೋಽಪ್ಯಾಗಾದಂತಿಕೇ ಹಂತ ತ್ಯಾಗರಾಜೈಕಮೋದಕಃ ॥ ೫೭ ॥

ಅಸ್ಯಾಶೀತಿತಮೇ ನೈಜೇ ಸಮಾಪ್ತೇ ವಯಸಿಕ್ಷಿತೌ ।
ವಸುಸಾಗರ ರತ್ನಾಭ್ಧೌ (೪೯೪೮) ಕಲೌ ಸಂವತ್ಸರೇ ಗತೇ ॥ ೫೮ ॥

ಪರಾಭವಾಭಿಧೇ ವರ್ಷೇ ಪುಷ್ಯಮಾಸೇ ಹಿಮಾಶ್ರಯೇ ।
ಕೃಷ್ಣಪಕ್ಷೇ ಚ ಪಂಚಮ್ಯಾಮತಿತೇಜೋಲಸನ್ಮುಖಃ ॥ ೫೯ ॥

ಧರಾತ್ಯಾಗಂ ವಿನಿಶ್ಚಿತ್ಯ ಸರ್ವಜ್ಞಃ ಸ ಯತೀಶ್ವರಃ ।
ಶಿಷ್ಯಾನಾಹೂಯ ತಾನ್ ಪ್ರೇಷ್ಠಾನ್ ಸಾಮ್ನಾ ಧರ್ಮಾನುಪಾದಿಶತ್ ॥ ೬೦ ॥

'ಇಯಂ ಗೀತಕಲಾ ದೈವೀ ಸರ್ವಜಂತು ಮನೋಹರಾ ।
ಆಧಿವ್ಯಾಧ್ಯಪಹಂತ್ರೀ ನಃ ಸಾದರಂ ಪರಿರಕ್ಷತಾಮ್ ॥ ೬೧ ॥

ಸಾಮವೇದ ಸಮುತ್ಥೇಯಂ ಗೀತಿರ್ವೇದಾನ್ನ ಹೀಯತೇ ।
ಗಂಧರ್ವವೇದ ಇತ್ಯೇನಾಂ ಯದಾಹುರ್ವೈದಿಕಾ ಅಪಿ ॥ ೬೨ ॥

ಕೃತೇ ಯತ್ ತಪಸಾ ಪ್ರಾಪ್ತಂ ತ್ರೇತಾಯಾಂ ಯಜನಾದಿಭಿಃ ।
ದ್ವಾಪರೇ ಯಚ್ಚ ಪೂಜಾಭಿಸ್ತತ್ಸರ್ವಂ ಕೀರ್ತನಾತ್ ಕಲೌ ॥ ೬೩ ॥

ನ ತಥಾ ಪ್ರೀಯತೇ ವೇದೈಃ ನಾಪಿ ಶಾಸ್ತ್ರೈರ್ನಪೂಜನೈಃ ।
ಯಥಾ ತು ಭಕ್ತಿತೋ ಗೀತೈಃ ಸುಸ್ವರೈಃ ಕೀರ್ತನೈರ್ಹರಿಃ ॥ ೬೪ ॥

ಸತ್ಸಂಗೀತಕಲಾ ಸೇಯಂ ಗುರ್ವನುಗ್ರಹಸುಗ್ರಹಾ ।
ಪರಸ್ಯ ಬ್ರಹ್ಮಣಃ ಪ್ರೀತ್ಯೈ ಸುಧೀಭಿರ್ವಿನಿಯುಜ್ಯತಾಮ್ ॥ ೬೫ ॥

ಭಕ್ತಿಶೂನ್ಯೇಷು ಮರ್ತ್ಯೇಷು ದೇಹಯಾತ್ರೈಕಲಬ್ಧಯೇ ।
ನ ಮೇಽಮೂಃ ಕೃತಯಃ ಪೂತಾಃ ಕೀರ್ತನೀಯಾಃ ಕದಾಚನ ॥ ೬೬ ॥

ನ ಕೇವಲೇಷು ರಾಗೇಷು ನ ತಾಲೇಷು ಲಯೇಷು ವಾ ।
ಆಸಕ್ತಾ ಭವತಾಮೂಷಾಂ ಭಾವಂ ಚಾತ್ರ ವಿಚಿನ್ವತ ॥ ೬೭ ॥

ಅಭಾವಂ ಕೀರ್ತಿತಾ ಗೀತಿರಭಾವಾಯೈವ ಕಲ್ಪ್ಯತೇ ।
ಮದಭ್ಯಸೂಯವೇ ನೈವ ರೋಚಂತೇ ಕೃತಯೋ ಮಮ ॥ ೬೮ ॥

ಅಪಸಾರ್ಯ ತು ಮಾತ್ಸರ್ಯಂ ವಿಚಾರ್ಯ ಸಕಲಾಃ ಕಲಾಃ ।
ಆಚಾರ್ಯವರ್ಯತಾಂ ಪ್ರಾಪ್ಯ ವಿರಾಜಧ್ವಂ ಹರಿಪ್ರಿಯಾಃ ॥ ೬೯ ॥

ಮಯಾರ್ಚಿತಮಿಮಂ ದೇವಂ ರಾಮಚಂದ್ರಂ ಸದಿಷ್ಟದಮ್ ।
ಅಭ್ಯರ್ಚ್ಯ ಯೂಯಮಪ್ಯಾಶು ಭವಬಂಧಂ ವಿಮುಂಚತ' ॥ ೭೦ ॥

ಇತ್ಯಾದೇಶಂ ಜನಸ್ವಾಂತೇ ರಾಮಚಂದ್ರಂ ನಿಜೇ ಕುಲೇ ।
ತ್ರಿಲೋಕ್ಯಾಂ ವಿಮಲಾಂ ಕೀರ್ತಿಂ ನಿಜಾಂ ಮೂರ್ತಿಂ ಚ ಭೂತಲೇ ॥ ೭೧ ॥

ಅಶ್ರುಧಾರಾಂ ಸುಹೃನ್ನೇತ್ರೇ ದುಃಖಪೂರಂ ಸುತಾಹೃದಿ ।
ಗಾಯಿಲೋಕೇ ಕೃತೀರ್ನೈಜಾಂ ರಾಘವಾಂಘ್ರೌ ಸ್ಥಿರಂ ಮನಃ ॥ ೭೨ ॥

ವಿನ್ಯಸ್ಯ ಹಂತ ಸನ್ಯಾಸಿಪ್ರವರೋ ಧನ್ಯಜೀವನಃ ।
ರಾಮರಾಮೇತಿ ಮಂತ್ರೋಕ್ತ್ಯಾ ವಿರರಾಮ ಧರಾತಲಾತ್ ॥ ೭೩ ॥

ಇನ್ನು ದೇಹತ್ಯಾಗ ಮಾಡಲು ಹತ್ತು ದಿನಗಳು ಮಾತ್ರ ಇರಲು, ಧರ್ಮಭೀರುವಾದ ತ್ಯಾಗರಾಜರು ಜನ್ಮಾಂತರ ವಿನಾಶಕ್ಕೋಸ್ಕರ ನಾಲ್ಕನೆಯ ಆಶ್ರಮವಾದ ಸಂನ್ಯಾಸವನ್ನು

ವಿಧಿವತ್ತಾಗಿ ಗುರುರಾಜರಿಂದ ಸ್ವೀಕರಿಸಿ ಆ ಆಶ್ರಮಕ್ಕೆ ವಿಹಿತವಾದ ಎಲ್ಲಾ ಧರ್ಮ ಗಳನ್ನೂ ಆಚರಿಸಿದರು.

ಅಯ್ಯೋ! ದಯಾರಹಿತವಾದ, ಜನತಾಪಕವಾದ, ತ್ಯಾಗರಾಜರಿಗೆ ಮಾತ್ರ ಇಷ್ಟ ವಾಗಿದ್ದ ಆ ಅಂತ್ಯಕಾಲವಾದ ಹತ್ತನೆಯ ದಿನವು ಬಂದೇಬಿಟ್ಟಿತು. ಈ ಭೂಮಿಯಲ್ಲಿ ತನ್ನ ೮೦ನೆಯ ವರ್ಷವು ಮುಗಿದಿರಲು, ಪರಾಭವ ಎಂಬ ಹೆಸರಿನ, ಕಲಿಯ ೪೯೪೮ನೇ ಸಂವತ್ಸರವು ಮುಗಿದಿರಲು, ಆ ಸಂವತ್ಸರದ ಪುಷ್ಯಮಾಸದ ಹಿಮಾಶ್ರಯದ ಕೃಷ್ಣಪಕ್ಷದ ಪಂಚಮಿಯಲ್ಲಿ ಅತ್ಯಂತ ತೇಜಸ್ಸಿನಿಂದ ಕೂಡಿದ ಮನಸ್ಸುಳ್ಳವರಾಗಿ, ಈ ಧರೆಯನ್ನು ಬಿಡಲು ನಿಶ್ಚಯಿಸಿದ ಆ ಯತೀಶ್ವರರು ತನ್ನ ಶಿಷ್ಯರನ್ನು ಕರೆದು ಅವರಿಗೆ ಈ ರೀತಿ ಯಾಗಿ ಧರ್ಮವನ್ನು ಉಪದೇಶಿಸಿದರು :

'ಈ ಗೀತಕಲೆಯೇ ದೇವರು. ಎಲ್ಲಾ ಜೀವಜಂತುಗಳಿಗೂ ಮನೋಹರವಾದುದು. ಆಧಿ ಹಾಗೂ ವ್ಯಾಧಿಗಳನ್ನು ಹೋಗಲಾಡಿಸುವ ಈ ಕಲೆಯು ನಮ್ಮನ್ನು ರಕ್ಷಿಸಲಿ.

'ಸಾಮವೇದದಂತಿರುವ ಈ ಕಲೆಯು ವೇದಕ್ಕಿಂತ ಕಡಿಮೆಯಿಲ್ಲ. ವೈದಿಕರೂ ಸಹ ಇದನ್ನು ಗಂಧರ್ವವೇದ ಎಂದೇ ಕರೆಯುತ್ತಾರೆ. ಕೃತಯುಗದಲ್ಲಿ ಯಾವುದು ತಪಸ್ಸಿ ನಿಂದ ಲಭ್ಯವಾಯಿತೋ, ತ್ರೇತಾಯುಗದಲ್ಲಿ ಯಾಗಾದಿಗಳಿಂದ ಲಭ್ಯವಾಯಿತೋ, ದ್ವಾಪರಯುಗದಲ್ಲಿ ಪೂಜೆಯಿಂದ ಲಭ್ಯವಾಯಿತೋ, ಅದು ಕಲಿಯುಗದಲ್ಲಿ ಕೀರ್ತನೆ ಗಳಿಂದ ಲಭ್ಯವಾಗುತ್ತದೆ.

'ಭಕ್ತಿಯಿಂದ ಹಾಡುವ ಸುಸ್ವರ ಕೀರ್ತನೆಗಳಿಂದ ಶ್ರೀಹರಿಯನ್ನು ತೃಪ್ತಿಪಡಿಸುವಂತೆ ವೇದಗಳಿಂದಾಗಲೀ, ಶಾಸ್ತ್ರಗಳಿಂದಾಗಲೀ ಅಥವಾ ಪೂಜೆಯಿಂದಾಗಲೀ ತೃಪ್ತಿಪಡಿಸಲು ಸಾಧ್ಯವಿಲ್ಲ. ಈ ಸತ್ಸಂಗೀತ ಕಲೆಯು ಗುರುವಿನ ಅನುಗ್ರಹದಿಂದ ಸುಲಭವಾಗಿ ದೊರೆತು, ಪರಬ್ರಹ್ಮನನ್ನು ತೃಪ್ತಿಪಡಿಸಲೋಸುಗ, ಬುದ್ಧಿವಂತರಿಂದ ಉಪಯೋಗಿಸಲ್ಪಡುತ್ತದೆ. ಭಕ್ತಿಯಿಲ್ಲದೆ ಉನ್ಮತ್ತರಾಗಿ ಉದರಪೋಷಣೆಗೆ ಮಾತ್ರ ಯಾರು ಈ ಕೀರ್ತನೆ ಗಳನ್ನು ಹಾಡುತ್ತಾರೋ ಅವರು ಯಾವಾಗಲೂ ಈ ಕೃತಿಗಳಿಂದ ಪಾವನರಾಗುವುದಿಲ್ಲ. ಕೇವಲ ರಾಗಗಳಲ್ಲಿ, ತಾಳಗಳಲ್ಲಿ ಅಥವಾ ಲಯಗಳಲ್ಲಿ ಪಾವನತ್ವವಿರುವುದಿಲ್ಲ. ಕೇವಲ ಇದರಲ್ಲಿ ಆಸಕ್ತರಾಗಿರುವವರು ಚೌಳುಭೂಮಿಯ ಭಾವವನ್ನು ಹೊಂದುವರು. ಇದನ್ನು ಸ್ವಲ್ಪ ಆಲೋಚಿಸಿ.

'ಹಾಡುಗಳಿಂದ ಅಭಾವವನ್ನು ಕೀರ್ತಿಸಿದರೆ ಅಭಾವವೇ ಕಲ್ಪಿತವಾಗುತ್ತದೆ. ನನ್ನ ಭಾವನೆಯ ಬಗ್ಗೆ ಅಸೂಯೆ ಪಡುವವರಿಗೆ ನನ್ನ ಕೃತಿಗಳು ರುಚಿಸುವುದಿಲ್ಲ. ಮತ್ಸರ ವನ್ನು ತ್ಯಜಿಸಿ, ಎಲ್ಲಾ ಕಲೆಗಳನ್ನೂ ವಿಚಾರಿಸಿ, ಸರಿಯಾದ ಆಚಾರ್ಯರನ್ನು ಪಡೆದು ಎಲ್ಲರೂ ಹರಿಪ್ರಿಯರಾಗಿರಿ.

'ನನ್ನಿಂದ ಅರ್ಚಿಸಲ್ಪಟ್ಟ ಈ ರಾಮವಿಗ್ರಹವು ನಿಮ್ಮ ಇಷ್ಟಾರ್ಥವನ್ನು ನೆರವೇರಿಸು ವುದು. ನೀವೂ ಸಹ ಈ ರಾಮಚಂದ್ರಮೂರ್ತಿಯನ್ನು ಅರ್ಚಿಸಿ, ಈ ಸಂಸಾರ ಬಂಧ ದಿಂದ ಮುಕ್ತರಾಗಿರಿ.'

ಹೀಗೆ ಉಪದೇಶಿಸಿ, ತನ್ನ ಕುಲದಲ್ಲಿ ರಾಮಚಂದ್ರನನ್ನೂ, ಮೂರು ಲೋಕದಲ್ಲಿ ನಿರ್ಮಲವಾದ ಕೀರ್ತಿಯನ್ನೂ, ಹಾಗೂ ಈ ಭೂತಲದಲ್ಲಿ ತನ್ನ ಮೂರ್ತಿಯನ್ನೂ ಸ್ಥಾಪಿಸಿದರು. ಸಹೃದಯರ ಕಣ್ಣಿನಲ್ಲಿ ಅಶ್ರುಧಾರೆ, ಮಕ್ಕಳ ಹೃದಯದಲ್ಲಿ ದುಃಖ ಪೂರವಾಯಿತು. ಗಾನಲೋಕದಲ್ಲಿ ತನ್ನ ಕೃತಿಗಳನ್ನೂ, ರಾಘವನ ಪದದಲ್ಲಿ ಸ್ಥಿರವಾದ ಮನಸ್ಸನ್ನೂ ಇಟ್ಟು ಧನ್ಯವಾದ ಜೀವನವನ್ನು ನಡೆಸಿದ ಈ ಸನ್ಯಾಸಿಪ್ರಮುಖರು 'ರಾಮರಾಮ' ಎಂಬ ಮೂಲಮಂತ್ರಪಠಣದ ಮೂಲಕ ಈ ಧರೆಯಲ್ಲಿ ಪೂರ್ಣ ವಿಶ್ರಾಂತಿಯನ್ನು ಪಡೆದರು.

ತದೈವ ತಚ್ಛಿರೋಮಧ್ಯಾದ್ ಬ್ರಹ್ಮಭಾವೋಪಪಾದಿನಾ ।
ದೈವೇನ ಜ್ಯೋತಿಷಾ ಕೇನಾಪ್ಯುದಾಜಗ್ಮೇಽಕ್ಷಿಹಾರಿಣಾ ॥ ೭೪ ॥

ಪಶ್ಯತಾಂ ಪುರತೋ ಜ್ಯೋತಿಸ್ತತ್ಕಪಾಲಾತ್ ಸಮುತ್ಥಿತಮ್ ।
ಕ್ಷಣೇನ ದಿವಮುದ್ಭಿದ್ಯ ವ್ಯಾನಶೇ ಸಕಲಂ ನಭಃ ॥ ೭೫ ॥

ಸಮಾಧಿಸಂಸ್ಥಿತಸ್ಯಾಸ್ಯ ಸ್ವಾಮಿನೋ ಜ್ಯೋತಿರಾತ್ಮನಃ ।
ಬ್ರಹ್ಮಭೂಯಂ ಗತಸ್ಯಾಸೀದ್ ವಪುರ್ಮಾತ್ರಂ ಜನೇಕ್ಷಿತಮ್ ॥ ೭೬ ॥

ಸ್ಮೃತಿಮಾತ್ರಪಥಂ ಯಾತಂ ಯತಿಂ ದುಃಖೇನ ದರ್ಶಿನಃ ।
ಶೂನ್ಯಮೇವ ಜಗತ್ ಸರ್ವಂ ಸಮೈಕ್ಷಂತ ವಿನಾ ಮುನಾ ॥ ೭೭ ॥

ಆ ಕ್ಷಣವೇ ಬ್ರಹ್ಮಭಾವವನ್ನು ಪ್ರತಿನಿಧಿಸುವ ಅವರ ತಲೆಯ ಮಧ್ಯಭಾಗದಿಂದ ಕಣ್ಣುಕೋರೈಸುವ ಜ್ಯೋತಿಯೊಂದು ಹೊಳೆಯಿತು. ಮುಂದೆ ಆ ಜ್ಯೋತಿಯು ಕಪಾಲ ಭಾಗದಿಂದ ಹುಟ್ಟಿಬಂದು ಕ್ಷಣಮಾತ್ರದಲ್ಲಿ ಮೇಲೇರಿ ಇಡೀ ಆಕಾಶವನ್ನು ವ್ಯಾಪಿಸಿತು. ಸಮಾಧಿಸಂಸ್ಥಿತರಾದ ಈ ಮಹಾತ್ಮರ ಜ್ಯೋತಿರಾತ್ಮವು ಬ್ರಹ್ಮನಲ್ಲಿ ಐಕ್ಯವಾಯಿತು. ದೇಹಮಾತ್ರವನ್ನು ಜನರು ನೋಡಿದರು; ದುಃಖದಿಂದ ನೋಡುತ್ತಿದ್ದ ಜನರ ಸ್ಮರಣೆಯಲ್ಲಿ ಮಾತ್ರ ಸಿಕ್ಕಬಹುದಾದ ಯತಿಯಾಗಿಹೋದರು. ಎಲ್ಲವನ್ನೂ ಒಂದೇ ರೀತಿಯಲ್ಲಿ ನೋಡುತ್ತಿದ್ದ ಅಂತಹವರು ಇಲ್ಲದೆ ಜಗತ್ತೆಲ್ಲವೂ ಶೂನ್ಯದಂತೆ ಕಂಡಿತು.

ತದಾ ದೇಶಾಂತರಾಯಾತೈಃ ಸಹತಚ್ಛಿಷ್ಯಪುಂಗವಾಃ ।
ಗ್ರಾಮಾತ್ ಪ್ರಾಚ್ಯಾಂ ಶುಚೌದೇಶೇ ಕಾವೇರ್ಯಂಬುಪವಿತ್ರಿತೇ ॥ ೭೮ ॥

ತಾಂ ತನುಂ ಗಾಂಗಪಾಥೋಭಿರಭಿಷಿಕ್ತಾಂ ಮಹಾತ್ವಿಷಮ್ ।
ಗಂಧಮಾಲ್ಯಾದಿಭಿರ್ಭದ್ರೈರಲಂಕೃತ್ಯ ವಿಜೃಂಭಣೈಃ ॥ ೭೯ ॥

ಸವಾದ್ಯಗೀತಸಾಮ್ನಾಯಂ ಸತತ್ಕೀರ್ತನಮಾಲಿಕಮ್ ।
ಭೂಸುರಾ ವಸುಧಾಗರ್ಭೇ ಸಸುರಾಬ್ರಹ್ಮರೂಪಿಣಮ್ ॥ ೮೦ ॥

ಯೋಜಯಾಮಾಸುರೀಶಾನಂ ಯತೀನಾಂ ಹತಪಾಪ್ಮನಾಮ್ ।
ಇದಂ ರತ್ನಮವಾಪ್ಯಾಸೀದ್ ರತ್ನಗರ್ಭಾ ವಸುಂಧರಾ ॥ ೮೧ ॥

ಅಥ ತಂ ದೇಶಮುತ್ಕೃಷ್ಟಮತಿಪೂತಮಘಾಪಹಮ್ ।
ಪರಿತಸ್ತ್ವರಿತಂ ರಮ್ಯಂ ಮಂದಿರಂ ನಿರ್ಮಮೇ ಜನೈಃ ॥ ೮೨ ॥

ತುಲಸೀವಿಲಸಚ್ಛೀರ್ಷಂ ಸಮಾಧಿಂ ವ್ಯಧಿವಾರಕಮ್ ।
ಅಸಿತಗ್ರಾವಭಿರ್ದಾಸ್ಯಾ ಬಬಂಧುರತಿ ಸುಂದರಮ್ ॥ ೮೩ ॥

ಆರಾಧನಾ ಗುರೋಶ್ಚಕ್ರೇ ದಶರಾತ್ರಂ ಮಹಾಜನೈಃ ।
ಯಥೇಷ್ಟಂ ಭೋಜಿತಾಃ ಸರ್ವೇ ಜಂತವೋ ಯತ್ರ ಸಂಗತಾಃ ॥ ೮೪ ॥

ಸರ್ವಾಶ್ಚ ಕೃತಯೋಽಮುಷ್ಯ ಕೃತಿನಃ ಸುಕೃತಾರ್ಣವೈಃ ।
ತಚ್ಛಿಷ್ಯೈಃ ಸರಸಂ ಗೀತಾಃ ಶ್ರವೋಭುಕ್ತಿಂ ಚ ಸಂದಧುಃ ॥ ೮೫ ॥

ಅಥಾಸ್ಮಿನ್ನುತ್ಸವೇ ದಿವ್ಯೇ ದಶಮೇಽಂತಿಮವಾಸರೇ ।
ತ್ಯಾಗರಾಜ ಗುರೋರ್ಮೂರ್ತಿರಾಲೇಖ್ಯಾತ್ಮಾ ಸ್ವಲಂಕೃತಾ ॥ ೮೬ ॥

ನಗರಂ ಸಮುಯಾನೀತಾ ವಾದ್ಯಘೋಷ ವಿಜೃಂಭಣೈಃ ।
ಸರ್ವಾನ್ ಭಕ್ತಾನ್ ಸಮಾಯಾತಾನನ್ವಗೃಹ್ಣಾ ಪ್ರಸಾದನೈಃ ॥ ೮೭ ॥

ಶಿಷ್ಯವರ್ಗದೊಡನೆ ಬೇರೆಬೇರೆ ಪ್ರದೇಶಗಳನ್ನು ಸುತ್ತಿ ಬಂದಿದ್ದ ತ್ಯಾಗರಾಜರ ಶರೀರವನ್ನು ಗ್ರಾಮದ ಪೂರ್ವಭಾಗದಲ್ಲಿರುವ ಕಾವೇರಿ ನದಿಯ ಸ್ವಚ್ಛವಾದ ಪ್ರದೇಶ ದಲ್ಲಿರಿಸಿ, ಗಂಗಾಜಲದಿಂದ ಅಭಿಷೇಕ ಮಾಡಿ, ಗಂಧ, ಹೂಮಾಲೆ ಇತ್ಯಾದಿಗಳಿಂದ ಅಲಂಕರಿಸಿದರು. ವಾದ್ಯಸಮೇತವಾದ ಒಳ್ಳೆಯ ಕೀರ್ತನೆ ಹಾಡುವುದಲ್ಲದೆ ವೇದ ಘೋಷವನ್ನು ಮಾಡಲಾಯಿತು. ಬ್ರಹ್ಮರೂಪಿಯಾದ ಈ ಭೂಸುರೋತ್ತಮನು, ಪಾಪಗಳನ್ನು ಹೋಗಲಾಡಿಸುವ ಯತೀಶ್ವರನಂತೆ ಭೂತಾಯಿಯ ರತ್ನಗರ್ಭದಲ್ಲಿ ಸೇರಿಹೋದನು.

ಅನಂತರ ಉತ್ಕೃಷ್ಟವಾದ ಪ್ರದೇಶವನ್ನು ಆರಿಸಿದ ಜನರು ಅಲ್ಲಿ ಭೂಗರ್ಭದಲ್ಲಿ ಇವರ ದೇಹವನ್ನಿರಿಸಿ, ಸುತ್ತಲೂ ಭವ್ಯವಾದ ಮಂದಿರವೊಂದನ್ನು ನಿರ್ಮಿಸಿದರು. ಸಮಾಧಿಯ ಶಿರೋಭಾಗದಲ್ಲಿ ವ್ಯಾಧಿಗಳನ್ನು ಹೋಗಲಾಡಿಸುವ ತುಳಸಿಯನ್ನು ರಾರಾ ಜಿಸುವಂತೆ ಅತಿ ಸುಂದರವಾಗಿ ನೆಟ್ಟು, ದಾಸಿಯು (ವಿದ್ಯಾಸುಂದರಿ ಬೆಂಗಳೂರು ನಾಗ ರತ್ನಮ್ಮ) ಧನ್ಯಳಾದಳು.

ಮಹಾಜನರು ಹತ್ತು ರಾತ್ರಿಗಳನ್ನು ಗುರುಗಳ ಆರಾಧನಾ ದಿನಗಳನ್ನಾಗಿ ಪರಿಗಣಿಸಿ ದರು ; ಎಲ್ಲರನ್ನೂ ಭೋಜನಾದಿಗಳಿಂದ ಈ ದಿನಗಳಲ್ಲಿ ಸಂತೃಪ್ತಿಗೊಳಿಸಿದರು. ಅವರ ಕೃತಿಗಳ ಶ್ರೇಷ್ಠತೆಯನ್ನು ಎಲ್ಲರೂ ಪರಿಗಣಿಸಿದರು ; ಅವರ ಶಿಷ್ಯರು ಅವುಗಳನ್ನು ಸರಸವಾಗಿ ಹಾಡಿ ಎಲ್ಲರಿಗೂ ಕರ್ಣಾಮೃತ ಧಾರೆಯನ್ನು ನೀಡಿದರು.

ಈ ಉತ್ಸವದ ಹತ್ತನೆಯ ದಿವಸದ ರಾತ್ರಿಯಲ್ಲಿ ಗುರು ತ್ಯಾಗರಾಜರ ಚಿತ್ರವನ್ನು ಬರೆದು ಅಲಂಕರಿಸಿ, ವಾದ್ಯಘೋಷ ಇತ್ಯಾದಿಗಳಿಂದ ಕೂಡಿ, ಊರಿನ ಸುತ್ತಲೂ

ಕೊಂಡೊಯ್ಯಲಾಯಿತು; ಮತ್ತು ಎಲ್ಲ ಭಕ್ತರನ್ನೂ ಕರೆತಂದು ಪ್ರಸಾದಾದಿಗಳಿಂದ ತೃಪ್ತಿಗೊಳಿಸಲಾಯಿತು.

ತಾದೃಶ್ಯಾರಾಧನಾದ್ಯಾಪಿ ದಶರಾತ್ರಂ ಪ್ರವರ್ತತೇ ।
ಯತ್ರ ಗಾಯಕ ಮೂರ್ಧನ್ಯಾಃ ಪ್ರಾಪ್ತಾಃ ಕ್ಷೇತ್ರಮಿದಂ ಮಹತ್ ॥ ೮೮ ॥

ವಿತೀರ್ಯ ಶಕ್ತಿತೋ ದ್ರವ್ಯಂ ಗಾಯಂತ್ಯೇ ತತ್ಕೃತೀಮುದಾ ।
ಅಧಿಕೇನ ಕಿಮುಕ್ತೇನ ದೇವದೇವೋತ್ಸವೋ ಹಿ ಸಃ ॥ ೮೯ ॥

ಪ್ರತ್ಯಹಂ ಪೂಜ್ಯತೇ ತಸ್ಯ ಸಮಾಧಿಃ ಪಾಪನಾಶಕಃ ।
ತುಲಸೀವನಮಧ್ಯಸ್ಥಃ ಸರ್ವಾಭೀಷ್ಟಫಲಪ್ರದಃ ॥ ೯೦ ॥

ಏತದ್ದೌಹಿತ್ರಸಂತಾನೇ ಸಂಜಾತಶ್ಚಾರುಗಾಯಕಃ ।
ಅಮುಂ ಪೂಜಯತಿ ಶ್ರೀಮಾನ್ ತ್ಯಾಗಬ್ರಹ್ಮಾಭಿದಂ ಗುರುಮ್ ॥ ೯೧ ॥

ಸಮಾಧಿಂ ಪರಿತಸ್ತ್ವದ್ಯ ಮಂದಿರಂ ಸುಂದರಂ ಮಹತ್ ।
ತದ್ಭಕ್ತಪ್ರವರ್ಯೈರಾಢ್ಯೈರ್ನಿರ್ಮಿತಂ ಸಹ್ಯಜಾತಟೇ ॥ ೯೨ ॥

ಸ್ನಾನಪಾನೋಚಿತೈಃ ರಮ್ಯೈಃ ಸೋಪಾನೈರುಪ ಶೋಭಿತಮ್ ।
ವಿರಾಜತೇ ಯಥಾ ಗಾಂಗೇ ತೀರೇ ವಾರಾಣಸೀ ಪುರೀ ॥ ೯೩ ॥

ಈ ರೀತಿಯ ಆರಾಧನೆಗಳಿಂದ ಹತ್ತು ರಾತ್ರಿಗಳ ಪರ್ಯಂತ ಸುಮನೋಹರವಾಗಿ, ಗಾಯಕಾಗ್ರಣಿ ದೊರೆತಿರುವ ಈ ಕ್ಷೇತ್ರವು (ತಿರುವೈಯ್ಯಾರ್) ಬಹಳ ಮಹತ್ವವುಳ್ಳದ್ದಾಗಿದೆ. ಇಲ್ಲಿ ತಮ್ಮ ಶಕ್ತ್ಯಾನುಸಾರ ದ್ರವ್ಯವನ್ನು ಖರ್ಚುಮಾಡಿ ಬಹಳ ಸಂತೋಷದಿಂದ ತ್ಯಾಗರಾಜರ ಕೃತಿಗಳನ್ನು ಹಾಡುತ್ತಾರೆ. ಅವರ ಉತ್ಸವವು ದೇವದೇವೋತ್ಸವಕ್ಕಿಂತ ಮಿಗಿಲಾಗಿದ್ದು ಇನ್ನು ಹೇಳುವುದೇನಿದೆ! ತುಳಸೀವನದ ಮಧ್ಯಭಾಗದಲ್ಲಿರುವ, ಎಲ್ಲರ ಇಷ್ಟಾರ್ಥಗಳನ್ನು ಪೂರೈಸಿಕೊಡುವ, ಪಾಪಗಳನ್ನು ಹೋಗಲಾಡಿಸುವ ತ್ಯಾಗರಾಜರ ಸಮಾಧಿಯು ಪ್ರತಿದಿನವೂ ಪೂಜಿಸಲ್ಪಡುತ್ತದೆ. ಇವರ ದೌಹಿತ್ರಸಂತಾನದಲ್ಲಿ ಸುಂದರವಾಗಿ ಹಾಡುವ ಗಾಯಕನೊಬ್ಬನು ಹುಟ್ಟಿದನು. ಈತನನ್ನು ತ್ಯಾಗಬ್ರಹ್ಮ ಎಂಬ ಗುರುವಿನ ಹೆಸರಿನಿಂದ ಎಲ್ಲರೂ ಗೌರವಿಸುತ್ತಾರೆ.

ಈಗ ಸಮಾಧಿಯ ಸುತ್ತಲೂ ಸುಂದರವಾದ ಮಹತ್ತಾದ ಮಂದಿರವು ನಿರ್ಮಾಣವಾಗಿದೆ. (ಇದನ್ನು ಮೊದಲು ವಿದ್ಯಾಸುಂದರಿ ಬೆಂಗಳೂರು ನಾಗರತ್ನಮ್ಮನವರು ಕಟ್ಟಿಸಿದರು.) ಇದನ್ನು ಸಹ್ಯಾದ್ರಿಯಿಂದ ಹುಟ್ಟಿಬಂದ ಕಾವೇರಿ ನದಿಯ ದಡದಲ್ಲಿ ಭಕ್ತಶ್ರೇಷ್ಠರೇ ನಿರ್ಮಿಸಿದ್ದಾರೆ. ವಾರಾಣಸೀ ಪಟ್ಟಣದ ಗಂಗಾ ನದೀತೀರದಲ್ಲಿಯಂತೆ ಇದು ಸ್ನಾನಪಾನಾದಿಗಳಿಗೆ ಉಪಯುಕ್ತವಾಗಿರುವ, ಬಹಳ ರಮ್ಯವಾದ ಮೆಟ್ಟಿಲುಗಳಿಂದ ಶೋಭಾಯಮಾನವಾಗಿದೆ.

ತಮೇತಮಾಲಯಂ ಭಕ್ತ್ಯಾ ಯಃ ಪ್ರಯಾತಃ ಸುಹೃತ್ ಸುಕೃತ್ ।
ಸಮಾಧಿಸ್ಥಂ ಗುರುಂ ಬ್ರಹ್ಮ ವಂದೇತಾಸ್ಯ ಪದೇ ಚ ಯಃ ॥ ೯೪ ॥
ಯಶ್ಚೈತಸ್ಯ ಕೃತೀರ್ಭಕ್ತ್ಯಾ ವರ್ಣಮಾತ್ರಮಪಿಸ್ಫುಟಮ್ ।
ಗಾಯೇದೇತೇ ಗುರುಪ್ರೀತ್ಯಾ ಬ್ರಹ್ಮಸಾಯುಜ್ಯಮಾಪ್ನುಯುಃ ॥ ೯೫ ॥
ಶ್ರೀತ್ಯಾಗಬ್ರಹ್ಮಣೋಽಮುಷ್ಯ ಪಾವನಂ ಚರಿತಂ ಮುದಾ ।
ವಕ್ತಾ ಶ್ರೋತಾ ಚ ಪೂತಾತ್ಮಾ ಬ್ರಹ್ಮಭಾವೇ ಮಹೀಯತೇ ॥ ೯೬ ॥

ಯಾರು ಬಹಳ ಭಕ್ತಿಯಿಂದ ತ್ಯಾಗರಾಜರ ಈ ಆಲಯಕ್ಕೆ ಒಂದು ಬಾರಿಯಾದರೂ ಬಂದು, ಸಮಾಧಿಸ್ಥರಾದ ಈ ಗುರುಬ್ರಹ್ಮನಿಗೆ ನಮಸ್ಕರಿಸಿ ಶರಣುಹೋಗುವರೋ, ಯಾರು ಇವರ ಕೃತಿಗಳಲ್ಲಿರುವ ವರ್ಣಗಳನ್ನಾದರೂ ಬಹಳ ಸ್ಫುಟವಾಗಿ ಭಕ್ತಿಯಿಂದ ಹಾಡುತ್ತಾರೋ ಅವರು ಈ ಗುರುವಿನ ಪ್ರೀತ್ಯಾನುಗ್ರಹಕ್ಕೆ ಪಾತ್ರರಾಗಿ ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾರೆ.

ಶ್ರೀ ತ್ಯಾಗರಾಜರ ಪಾವನಚರಿತ್ರೆಯನ್ನು ಬಹಳ ಸಂತೋಷದಿಂದ ಹೇಳುವವರು ಹಾಗೂ ಕೇಳುವವರು ಪೂತಾತ್ಮರಾಗಿ ಬ್ರಹ್ಮಭಾವದಲ್ಲಿ ಸೇರಿಹೋಗುತ್ತಾರೆ.

ಇತ್ಥಂ ಮುಕ್ತಃ ಸ ಭಕ್ತಪ್ರವರ ಉರುಕೃಪೋ ಗಾಯಿಲೋಕೈಕ ದೀಪಃ
ತ್ಯಕ್ತಕ್ಷುದ್ರಾರ್ಥಕಾಮೋ ಹ್ಯಘಹರಣಚರಣ ವ್ಯಕ್ತಕೀರ್ತ್ಯೇಕ ಮೂರ್ತಿಃ ।
ಸಕ್ತಃ ಶ್ರೀರಾಮನುತ್ಯಾಂ ಸಕಲಜನಮನೋರಕ್ತಶುದ್ಧ ಭಾವಃ
ಶ್ರೀಮಾನ್ ಧೀಮಾನ್ ಸುರಾಂಶಃ ಸಕರುಣಮವತಾತ್ ತ್ಯಾಗರಾಜಃ
ಸದಾಸ್ಮಾನ್ ॥ ೯೭ ॥

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್
ಮುತ್ತಯ್ಯ ಭಾಗವತವಿರಚಿತೇ ಶ್ರೀಮತ್ತ್ಯಾಗರಾಜವಿಜಯೇ
ಸಪ್ತಮ ಸರ್ಗಃ

ಈ ರೀತಿಯಾಗಿ ಮುಕ್ತಿ ಪಡೆದ ಆ ಭಕ್ತಶ್ರೇಷ್ಠನಾದ, ಗಾನಲೋಕದ ಏಕೈಕ ಜ್ಯೋತಿಯಾದ, ಕ್ಷುದ್ರವಾದ ಐಹಿಕ ಸುಖೇಚ್ಛೆಗಳನ್ನು ತೊರೆದ, ಪಾಪಗಳನ್ನು ಹೋಗಲಾಡಿಸುವ, ಕೀರ್ತಿಯ ಏಕಮೂರ್ತಿಯಾದ, ಶ್ರೀರಾಮನಲ್ಲಿ ಯಾವಾಗಲೂ ನೆಟ್ಟಮನಸ್ಕನಾದ, ಸಕಲ ಜನರ ಮನಸ್ಸಿನ ಮೇಲೆ ಒಳ್ಳೆಯ ಪ್ರಭಾವವನ್ನು ಬೀರಿದ ಕೃತಿಗಳು ಮತ್ತು ಗುಣಗಳಿಂದ ಶ್ರೀಮಂತರಾದ ಧೀಮಂತರಾದ ತ್ಯಾಗರಾಜರು ನಮ್ಮೆಲ್ಲರನ್ನೂ ಕರುಣೆಯಿಂದ ರಕ್ಷಿಸಲಿ.

ಇತಿ 'ಗಾಯಕಶಿಖಾಮಣಿ' ಹರಿಕೇಶನಲ್ಲೂರ್

# ಪದಾರ್ಥ ಚಂದ್ರಿಕಾ

## ಸರ್ಗ ಏಳು

೧. ಭೋಗೇ ಫಣಿಪತಿಶರೀರೇ ನಿಷಾವರಸಿಕಂ—ಫಣಿಪತಿಯ ಶರೀರದಲ್ಲಿ ಶಯನ ಸುಖವುಳ್ಳವನು.

೧೨. ಸುಮನೋಹಾರಿ ಸೌಂದರ್ಯಂ—ಹೃದಯಾಕರ್ಷ ಶರೀರಸೌಂದರ್ಯವಿರುವವನು. ಪುಷ್ಪಾಣಾಂಹಾರಿ—ಹಾರವುಳ್ಳ ವಿಗ್ರಹಮೂರ್ತಿಯು ಯಾರಿಗೆ ಇದೆಯೋ ಅವನು.

೨೧. ವಿತರನ್ . . . ಅತರತ್—ಸಂಸಾರಸಾಗರವನ್ನು ದಾಟಿದನು.

೩೯. ನವಸಾಲ ಎಂಬ ಹೆಸರಿನ ಪುರ—ಪುದುಕೋಟ್ಟೈ.

೪೪. ಅನಿನಾರದಂ—ನಾರದನನ್ನು ಮೀರಿದಂತಹ.

೫೧. ತದ್ವಿನಾಶ್ಯತದಪರಂ—ಅದಕ್ಕಿಂತ ಬೇರೆಯಾದ, ಉಳಿಯುವ ಜನ್ಮವನ್ನು ಹೇಗೋ ಕಳೆದು.

೭೯. ಗಾಂಗಪಾಥೋಭಿಃ—ಭಾಗೀರಥಿಯ ತೀರ್ಥಗಳಿಂದ.

೮೭. ನಗರಂ ಸಮಂಯೂ—ಪಟ್ಟಣದ ಸುತ್ತಲೂ. ಸುರಾಂಶಃ—ದೇವತಾಂಶ ಸಂಭೂತನಾದ. 'ಯದ್ಯದ್ ವಿಭೂತಿಮತ್ ಸರ್ವಂ ಶ್ರೀಮದೂರ್ಜಿತಮೇವ ವಾ। ತತ್ತ ದೇವಾವಗಚ್ಛ ತ್ವಂ ಮಮ ತೇಜೋಂಶ ಸಂಭವಮ್ ॥'—ಹೀಗೆಂದು ಭಗವದುಕ್ತಿ ಪ್ರಮಾಣದಿಂದ ಅವನಿಗೆ ದೇವತಾಂಶತ್ವವನ್ನು ಹೇಳಲಾಗಿದೆ ಎಂಬುದು ತಾತ್ಪರ್ಯ.

ಹೀಗೆ ಲಘುಟಿಪ್ಪಣಿಯು ಮುಗಿಯಿತು.

**ಶ್ರೀ ತ್ಯಾಗರಾಜರಿಗೆ ಅರ್ಪಿತವಾಗಲಿ**

ಓಂ ತತ್ಸತ್

ಗ್ರಂಥವು ಸಂಪೂರ್ಣ

**ಶ್ರೀರಾಮಾರ್ಪಣಂ**

# ಅನುಬಂಧ

## ಕೆಲವು ಟಿಪ್ಪಣಿಗಳು (ಸರ್ಗ ಏಳು)

ಶ್ಲೋಕ ೮–೧೦ : ತ್ಯಾಗರಾಜರು ತಿರುಪತಿಗೆ ಭೇಟಿಯಿತ್ತು ತಿರುಮಲೆಯನ್ನು ತಲುಪಿ ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನ ಮಾಡಿ ಸ್ವಾಮಿಯ ದೇವಾಲಯಕ್ಕೆ ಹೋದಾಗ, ಸನ್ನಿಧಿಯಲ್ಲಿ ತೆರೆ ಹಾಕಿದ್ದಿತು. ಆಗ 'ತೆರತೀಯರಾದ' ಎಂಬ ಗೌಳೀಪಂತು ರಾಗದ ಕೃತಿಯನ್ನು ಹಾಡಿದರು. ಹಾಡು ಮುಗಿದ ಕೂಡಲೇ ತೆರೆಯು ಬಿದ್ದು, ಸ್ವಾಮಿಯ ದರ್ಶನ ಮಾಡಿದ ತ್ಯಾಗರಾಜರು ಆನಂದಪರವಶರಾಗಿ 'ವೆಂಕಟೇಶ ನಿನು ಸೇವಿಂಪ' (ಮಧ್ಯಮಾವತಿ) ಎಂಬ ಕೃತಿಯನ್ನೂ, 'ತರಮಾ ನೀ ಮಹಿಮ' (ಕಲ್ಯಾಣಿ) ಎಂಬ ಕೃತಿಯನ್ನೂ ಹಾಡಿದರು. ಇವುಗಳಲ್ಲಿ 'ನಾಗಾಚಲ' ಎಂಬ ಕ್ಷೇತ್ರಮುದ್ರೆ ಇದೆ.

ಶ್ಲೋಕ ೧೫–೧೯ : ಈ ಘಟನೆಯು ಸಂಭವಿಸಿದಾಗ ಅವರು ಬಿಲಹರಿ ರಾಗದ 'ನಾಜೀವಾಧಾರ' ಎಂಬ ಕೃತಿಯನ್ನು ಹಾಡಿ ಯಶಾತ್ರಿಕ ಶೇಷಯ್ಯನಿಗೆ ತುಳಸೀ ತೀರ್ಥವನ್ನು ಪ್ರೋಕ್ಷಿಸಿ ಬದುಕಿಸಿದರು.

ಶ್ಲೋಕ ೨೬–೩೨ : ದಾರಿಯಲ್ಲಿ ತ್ಯಾಗರಾಜರ ಪ್ರವಾಸೀ ತಂಡವನ್ನು ಕಳ್ಳರು ಸುತ್ತುವರಿದರು. ವಿಷಯ ತಿಳಿದ ತ್ಯಾಗರಾಜರು 'ಮುಂದುವೆನುಕ' ಎಂಬ ದರ್ಬಾರ್ ರಾಗದ ಕೃತಿಯನ್ನು ಹಾಡಿದರು.

ಶ್ಲೋಕ ೩೩ : ತ್ಯಾಗರಾಜರು ಶ್ರೀರಂಗಕ್ಕೆ ಭೇಟಿಯಿತ್ತಾಗ ಶ್ರೀರಂಗನಾಥಸ್ವಾಮಿಯನ್ನು ಕುರಿತು ರಚಿಸಿ ಸ್ತುತಿಸಿರುವ ಕೃತಿಗಳು 'ಶ್ರೀರಂಗಂ ಪಂಚರತ್ನ'ವೆಂದು ಪ್ರಸಿದ್ಧವಾಗಿವೆ. ಇವು 'ರಾಜುವೆಡಲೆ' (ತೋಡಿ); 'ಓ ರಂಗಶಾಯಿ' (ಕಾಂಭೋಜಿ); 'ಜೂತಾಮು ರಾರೆ' (ಆರಭಿ); 'ವಿನರಾದ ನಾಮನವಿ' (ದೇವಗಾಂಧಾರಿ); ಮತ್ತು ಕರುಣ ಜೂಡವಯ' (ಸಾರಂಗ).

ಶ್ಲೋಕ ೪೧–೪೩ : ಪುದುಕೋಟೆಯಲ್ಲಿ ತ್ಯಾಗರಾಜರು ಜ್ಯೋತಿಸ್ವರೂಪಿಣಿ ರಾಗವನ್ನು ಹಾಡಿದಾಗ ದೀಪಗಳು ಹತ್ತಿಕೊಂಡ ಘಟನೆಯನ್ನು ಕುರಿತು ಇಲ್ಲಿ ಹೇಳಲಾಗಿದೆ.

ವಚನ ಭಾರತ (ಸರಳ ಗದ್ಯ–ಸಚಿತ್ರ)—ಎ. ಆರ್. ಕೃಷ್ಣಶಾಸ್ತ್ರೀ ... ೯೫ ೧೦
ಸದ್ಗುರು ತ್ಯಾಗರಾಜರು (ಜೀವನ–ಸಾಧನೆ–ಕೊಡುಗೆ)—ವಿ. ಎಸ್. ಸಂಪತ್ಕುಮಾರಾಚಾರ್ಯ ೭೫ ೦೦
ಶ್ರೀ ತ್ಯಾಗರಾಜ ಕೃತಿಮಂಜರಿ (ಸಂಪೂರ್ಣ ಪಾಠ. ಸಾಹಿತ್ಯ, ಭಾವಾರ್ಥ, ಟಿಪ್ಪಣಿ ಸಹಿತ—
ಎರಡು ಸಂಪುಟಗಳಲ್ಲಿ)—ವಿ. ಎಸ್. ಸಂಪತ್ಕುಮಾರಾಚಾರ್ಯ (ಸೆಟ್) ೨೫೦ ೦೦
ಸಂಗೀತ ರಸಿಕ ರಂಜನಿ (ಸಂಗೀತವನ್ನು ಸವಿಯುವ ಸುಲಭ ಮಾರ್ಗ)
—ವಿ. ಎಸ್. ಸಂಪತ್ಕುಮಾರಾಚಾರ್ಯ ... ... ... ೬೦ ೦೦
ಗೀತಾರ್ಥಪ್ರಕಾಶ : ಶ್ರೀಮದ್ಭಗವದ್ಗೀತೆಯ ಸಾರಸರ್ವಸ್ವ (ಸಂಸ್ಕೃತ ಮೂಲ,
ಶ್ಲೋಕಾರ್ಥ, ಟಿಪ್ಪಣಿ, ವಿವರಣೆ ಮತ್ತು ಅಧ್ಯಾಯಸಾರಗಳೊಡನೆ) ... ೭೫ ೦೦
—ಎನ್. ರಂಗನಾಥ ಶರ್ಮಾ ... ... ... ೬೦ ೦೦
ಕಾವ್ಯಗಾಯನ ಸ್ತೋತ್ರಮಂಜರಿ (ಪರಂಪರಾಗತ ವ್ರತಕಥಾದಿಗಳು ಮತ್ತು ಕಥನ ಕಾವ್ಯ
ಗಳ ಅಮೂಲ್ಯ ಸಂಗ್ರಹ; ಸ್ತೋತ್ರಗಳ ಹಿನ್ನೆಲೆ, ವಸ್ತು–ವಿಷಯಗಳನ್ನು ಕುರಿತ
ಪೀಠಿಕೆಗಳೊಡನೆ)—ಸಂ : ಪಿ. ಆರ್. ಜಯಲಕ್ಷಮ್ಮ
ಬಸವಣ್ಣನವರ ವಚನಗಳು—ಸಂ : ಎಲ್. ಬಸವರಾಜು ... ... ೫೦ ೦೦
ಅಕ್ಕನ ವಚನಗಳು—ಸಂ : ಎಲ್ ಬಸವರಾಜು ... ... ... ೬೦ ೦೦
ಅಲ್ಲಮನ ವಚನಗಳು—ಸಂ : ಎಲ್. ಬಸವರಾಜು ... ... ೬೦ ೦೦
ಸರ್ವಜ್ಞನ ವಚನಗಳು—ಸಂ : ಎಲ್. ಬಸವರಾಜು ... ... ೬೦ ೦೦
ದೇವರ ದಾಸಿಮಯ್ಯನ ವಚನಗಳು—ಸಂ : ಎಲ್. ಬಸವರಾಜು ... ... ೬೦ ೦೦
ಛಂದೋಗತಿ—ಸೇಡಿಯಾಪು ಕೃಷ್ಣಭಟ್ಟ ... ... ... ೭೫ ೦೦
ರಾಘವಾಂಕನ ಹರಿಶ್ಚಂದ್ರ ಕಾವ್ಯಂ—ಸಂ : ಎನ್. ಬಸವಾರಾಧ್ಯ; ಎಸ್. ಬಸಪ್ಪ ... ೫೫ ೦೦
ಸೂಲಂಗಿ (ಮೂವತ್ತು ಚಿಂತನಗಳು)—ಹಾ. ಮಾ. ನಾಯಕ ... ... ೨೦ ೦೦
ಭಾರತರತ್ನ ಸರ್ದಾರ್ ಪಟೇಲ್—ಎ. ಪಿ. ಶ್ರೀನಿವಾಸಮೂರ್ತಿ ... ... ೪೦ ೦೦
ಬದುಕು, ಬೆಳಕು (ಸ್ಮೃತಿಚಿತ್ರಗಳು, ಸಮೀಕ್ಷೆಗಳು)—ಎಸ್. ವಿ. ಪರಮೇಶ್ವರ ಭಟ್ಟ ೬೦ ೦೦
ಮಾನ : ಹಾ. ಮಾ. ನಾಯಕ ಅಭಿನಂದನ ಗ್ರಂಥ—ಸಂ : ಎಸ್. ಎಲ್. ಭೈರಪ್ಪ ;
ಜಿ. ಆರ್. ಲಕ್ಷ್ಮಣರಾವ್ ; ಪ್ರಧಾನ್ ಗುರುದತ್ತ ... ... ೨೨೫ ೦೦
ಕಟ್ಟೀಮನಿ : ಬದುಕು–ಬರಹ—ಸಂ : ದೇಜಗೌ ; ಸಿ. ಪಿ. ಕೆ. ... ... ೧೪೦ ೦೦
ಕಟ್ಟುವೆವು ನಾವು (ಚಿಂತನಪರ ಲೇಖನಗಳು)—ವ್ಯಾಸರಾಯ ಬಲ್ಲಾಳ ... ೫೦ ೦೦
ನಾಡೋಜ ಪಂಪ—ಮುಳಿಯ ತಿಮ್ಮಪ್ಪಯ್ಯ ... ... ... ೧೨೫ ೦೦
ಕನ್ನಡ ಮಧ್ಯಮ ವ್ಯಾಕರಣ—ತೀ. ನಂ. ಶ್ರೀಕಂಠಯ್ಯ ... ... ೪೫ ೦೦
ಸುಲಭ ಇಂಗ್ಲಿಷ್ (*English Made Easy*)—ಎಲ್. ಎಸ್. ಶೇಷಗಿರಿರಾವ್ ೬೫ ೦೦
ಪುಸ್ತಕ ಸಂಸ್ಕೃತಿ (ಒಂದು ನೂರು ಪುಸ್ತಕಗಳ ಪರಿಚಯ)—ಹಾ. ಮಾ. ನಾಯಕ ... ೧೫೦ ೦೦
ರುಚಿರ (ಪಾಕಶಾಸ್ತ್ರದ ಮೂಲ ಪರಿಚಯ ; ನಾನಾ ರಾಜ್ಯಗಳ ಸಾವಿರಕ್ಕೂ ಮೀರಿದ ದಿನನಿತ್ಯದ
ಸಸ್ಯಾಹಾರಿ ಊಟ, ಉಪಾಹಾರ, ಪಾನೀಯಗಳು, ವಿಶೇಷ ಖಾದ್ಯಗಳನ್ನು ಮಾಡುವ ಪ್ರಕಾರ
ಗಳು ; ಇವುಗಳನ್ನು ಮಾಡಲು ಬೇಕಾದ ಪರಿಕರಗಳು ; ಗೃಹಿಣಿಯ ಕುಶಲತೆ ; ಇತ್ಯಾದಿ—
ಅನೇಕ ರಂಜಕ ಬಹುವರ್ಣ ಚಿತ್ರಗಳು, ರೇಖಾಚಿತ್ರಗಳೊಡನೆ)—ಕಮಲಾಬಾಯಿ ಓಗಲೆ (ಅನು :
ವಿದ್ಯಾ ಡಿ. ವಿ. ಮೂರ್ತಿ)—ಎರಡು ಸಂಪುಟಗಳಲ್ಲಿ
ಸಂಸ್ಕೃತ–ಕನ್ನಡ ಶಬ್ದಾರ್ಥಪ್ರಕಾಶ (ಸಂಸ್ಕೃತ–ಕನ್ನಡ ಬೃಹತ್ ನಿಘಂಟು)—ಜಿ. ಎನ್. ಚಕ್ರವರ್ತಿ
ಕನ್ನಡ ಸಾಹಿತ್ಯ ಚರಿತ್ರೆ—ರಂ. ಶ್ರೀ. ಮುಗಳಿ (ಹತ್ತನೆಯ ಪರಿಷ್ಕೃತ ಸಂಸ್ಕರಣ)
ಕನ್ನಡ ಭಾಷಾಶಾಸ್ತ್ರ—ರಾ. ಯ. ಧಾರವಾಡಕರ (ಎಂಟನೆಯ ಪರಿಷ್ಕೃತ ಸಂಸ್ಕರಣ)